ವೆಂಬುದರ ಪ್ರಜ್ಞೆ ಶ್ರೀಪುರಂದರದಾಸರಲ್ಲಿ ಪರಿಪೂರ್ಣ ವಿಕಾಸಗೊಂಡಿದೆ. ಎಂತಲೇ ಈ ಮೂರರ ಬಗೆಗೂ ಮಾನವನಲ್ಲಿ ಅನಾಸಕ್ತಿಯುಂಟಾಗುವಂತೆ ಅನೇಕ ಸಾಹಿತ್ಯಕೃತಿಗಳನ್ನು ರಚಿಸಿದ್ದಾರೆ. ಹೊನ್ನು ಎಂದರೆ ಸಂಪತ್ತು ಅಸ್ಥಿರವೆಂದೂ, ಅದು ಇದ್ದಾಗ ಮನುಷ್ಯತ್ವದ ಸಾಧನೆಯ ಆದರ್ಶಗಳನ್ನು ಮರೆಯಿಸುವುದೆಂದೂ ದಾಸರು ಅನೇಕ ಪುರಾಣ-ಕಥೆಗಳ ದೃಷ್ಟಾಂತವನ್ನು ಕೊಟ್ಟು ಪರಿಣಾಮಕಾರಿಯಾದ ರೀತಿಯಲ್ಲಿ ವಿವರಿಸಿದ್ದಾರೆ:

‘ ನೆಚ್ಚಬೇಡ ಭಾಗ್ಯವನು ಹುಚ್ಚುಗೊಂಡ ಮನುಜಾ ।
ವೆಚ್ಚವಾಗಿಹೋಗುವುದು ಏಸೊಂದು ಬಗೆಯಲಿ ॥ ಪಲ್ಲ ॥
ಮುತ್ತು-ಮಾಣಿಕದ ನವರತ್ನದ ಗದ್ದುಗೆಯು
ಎತ್ತನೋಡಲು ಸಿರಿ ಕೋ ಎನುತಲಿ ॥
ಸತ್ಯ ಹರಿಶ್ಚಂದ್ರ ಮತ್ತೆ ಸುಡುಗಾಡಿನಲಿ
ಎತ್ತುವ ಹಣೆಯಕ್ಕಿ ಹಾಗದ ಕಾಸ ॥ ೧ ॥

ಈ ದೃಷ್ಟಾಂತವನ್ನು ಕುರಿತು ಅನೇಕರು ‘ ಸತ್ಯಪಾಲನೆಗಾಗಿ ಹರಿಶ್ಚಂದ್ರ ತಾನಾಗಿಯೇ ಭಾಗ್ಯಬಿಟ್ಟು ಹೋದ ’ ಎಂದು ಆಕ್ಷೇಪವನ್ನು ಎತ್ತಬಹುದೆಂದು ಭಾವಿಸಿಯೋ ಏನೋ!—ಮುಂದಿನ ಪುರಾಣದೃಷ್ಟಾಂತವನ್ನು ಹೀಗೆ ಹೇಳಿದ್ದಾರೆ:

‘ ದೇವತೆಗಳ ಕೈಯ ಸೇವೆಯ ಕೊಳುತಿರ್ದ
ರಾವಣನ ಬದುಕು ಮತ್ತೇನಾಯಿತು?
ಜೀವದ ಪರಿಯರಿತು ನಾವು ದೊರೆಯೆಂಬುದೆ?
ಸಾವಿನ ಮನೆಹೊಕ್ಕು ಸಾಹಸಪಡಲೇಕೆ? ’

ರಾವಣನ ಮಹಾಭಾಗ್ಯ, ಆತನ ಮನಸ್ಸು-ಹೃದಯಗಳನ್ನು ತಿದ್ದಲು ಸಹಕಾರಿಯಾಗಲಿಲ್ಲ; ಇಷ್ಟೇ ಅಲ್ಲ, ಅದರ ಮೂಲಕ ನೆಲೆಗೊಂಡ ಅಹಂಕಾರ, ಆತನ ಬದುಕನ್ನೇ ಹಾಳುಮಾಡಿತು. ಇನ್ನು ಹೆಣ್ಣು-ಗಂಡಿನ ಪ್ರೇಮ-ಪ್ರೀತಿಗಳ ವಿಷಯ: ಈ ಮೋಹನಾಟಕದ ಬೀಭತ್ಸರೂಪವನ್ನೂ ದಾಸರು ಚೆನ್ನಾಗಿ ಕಂಡವರಾಗಿದ್ದಾರೆ. ಮೋಹಮೂಲವಾದ ಅಜ್ಞಾನದಿಂದ, ಕಾಮ-

ಮೂಲವಾದ ಹೆಣ್ಣು-ಗಂಡಿನ ಪರಸ್ಪರ ಆಕರ್ಷಣೆಯನ್ನು ಪ್ರೇಮ-ಪ್ರಣಯ-ಗಳೆಂದು ಬಣ್ಣಿಸುವ ಭಾವುಕರನ್ನು ದಾಸರು ಸಾಕಷ್ಟು ವ್ಯಂಗ್ಯ-ವಿಡಂಬನೆ-ಗಳಿಂದ ಛೇಡಿಸಿದ್ದಾರೆ :

‘ ಅನ್ಯರಲಿ ಜನಿಸಿರ್ದ ಅಂಗನೆಯ ಕರೆತಂದು
ತನ್ನ ಮನೆಗವಳ ಯಜಮಾನಿಯೆನಿಸಿ ।
ಭಿನ್ನವಿಲ್ಲದೆ ಅರ್ಧದೇಹವೆನಿಸುವ ಸತಿಯು
ಕಣ್ಣಿನಲಿ ನೋಡಲಂಜುವಳು ಕಾಲನೊಯ್ವಾಗ ॥ ’

ಇನ್ನೊಂದೆಡೆಯಲ್ಲಿ ಚುಚ್ಚುಮಾತನ್ನಾಡಿದುದು ಹೀಗೆ :

‘ ತಂದುಬಂದರೆ ತನ್ನ ಪುರುಷನ
ಬನ್ನಿ ಬಳಲಿದಿರೆಂಬಳು ॥
ಒಂದು ದಿನವೇ ತಾರದಿದ್ದರೆ
ಹಂದಿ-ನಾಯಂತೆ ಬೊಗಳ್ವಳು ॥ ’

ಆದುದರಿಂದಲೇ ದಾಸರು ಹೇಳುವ ಉಪದೇಶವಿದು :

‘ ಶೋಕಗೈದಳುವವರು ಸತಿ-ಸುತರು ಬಾಂಧವರು
ಜೋಕೆ ತಪ್ಪಿದ ಬಳಿಕ ಅರ್ಥ ವ್ಯರ್ಥ
ಲೋಕದಲಿ ಸ್ಥಿರವಾದ ಕೀರ್ತಿ-ಅಪಕೀರ್ತಿಗಳೆ
ಸಾಕಾರವಾಗಿ ಸಂಗಡ ಬಾಹುವಲ್ಲದೆ ॥ ’

## ೧೨ ಹರಿದಾಸರಿಗೆ ವೈರಾಗ್ಯ ಅತ್ಯಗತ್ಯ

ಭಕ್ತಿ-ಜ್ಞಾನಗಳಂತೆ ಮಾನವಜೀವನಸಿದ್ಧಿಗೆ ವೈರಾಗ್ಯವೂ ಬೇಕೆಂ-ಬುದು ಶ್ರೀಪುರಂದರದಾಸರ ಸಂದೇಶವಾಗಿದೆ. ‘ ಲಂಗೋಟಿ ಬಲು ಒಳ್ಳೆಯ-ದಣ್ಣ ’ ಎಂದು ಹಾಡಿದ ಹಾಡು, ಈ ಸಂದೇಶದ ಪರ್ಯಾಯವಚನವೇ ಆಗಿದೆ. ವೈರಾಗ್ಯಭಾವಕ್ಕೆ ಸ್ವಲ್ಪವೂ ಎಡೆಯಿಲ್ಲದೆ ವೈರಾಗ್ಯದ ವೇಷಹಾಕಿ ಜನರನ್ನು ಭ್ರಮೆಯಲ್ಲಿ ಕೆಡಹುವ ಧಾರ್ಮಿಕಬ್ರುವರನ್ನೆಲ್ಲ ನಿಷ್ಠುರ ನುಡಿ-ಗಳಿಂದ ವಿಡಂಬಿಸಿ ಮಾತನಾಡಿದ್ದಾರೆ :

‘ ಉದರವೈರಾಗ್ಯವಿದು—ನಮ್ಮ
ಪದುಮನಾಭನಲಿ ಲೇಶಭಕುತಿಯಿಲ್ಲ ॥
ಕಂಚುಗಾರರಾ ಬೀಡಾರದಂದದಿ
ಕಂಚು-ಹಿತ್ತಾಳೆಯ ಪ್ರತಿಮೆಯ ನೆರಹಿ ॥
ಮಿಂಚಲೆನುತ ಬಹು ಜ್ಯೋತಿಗಳನು ಹಚ್ಚಿ
ವಂಚನೆಯಲಿ ಬಲು ಪೂಜೆಮಾಡುವುದು ॥ ’

ಈ ಪೂಜಕರನ್ನಷ್ಟೇ ಅಲ್ಲ; ಡಂಭಾಚಾರಕ್ಕಾಗಿ ಧರ್ಮನಿಯಮಗಳನ್ನು ಆಚರಿಸುವವರೆಲ್ಲರನ್ನೂ ದಾಸರು ದೂಷಿಸಿ ನುಡಿದಿದ್ದಾರೆ :

‘ ಉದಯಕಾಲದೊಳೆದ್ದು ಗದಗದ ನಡುಗುತ
ನದಿಯೊಳು ಮಿಂದೆವೆಂದು ಗಳುಹುತಲಿ
ಮದ-ಮತ್ಸರ-ಕ್ರೋಧ ಒಳಗೆ ತುಂಬಿಟ್ಟುಕೊಂಡು
ಬದಿಯಲಿದ್ದವರಿಗಾಶ್ಚರಿಯ ತೋರುವುದು ! ’

ಇದೆಲ್ಲವೂ ಉದರವೈರಾಗ್ಯ; ಇಂತಹ ವೈರಾಗ್ಯಶೀಲಬ್ರುವರನ್ನು ಕಂಡೇ ದಾಸರು :

‘ ನಗೆಯು ಬರುತಿದೆ ಎನಗೆ—ನಗೆಯು ಬರುತಿದೆ ।
ಜಗದೊಳಿದ್ದ ಜನಗಳೆಲ್ಲ ಹಗರಣ ಮಾಡುವುದ ಕಂಡು । ’

ಎಂದು ತಿರಸ್ಕಾರದಿಂದ ನಕ್ಕು ನುಡಿದಿದ್ದಾರೆ. ಮಾನವನು ಧನವನ್ನು ಗಳಿಸುವುದಾದರೆ, ಅವನು ನಿಜವಾಗಿಯೂ ಭಕ್ತಿ-ವೈರಾಗ್ಯ-ಜ್ಞಾನ ಧನವನ್ನು ಗಳಿಸಬೇಕೆಂಬ ನೀತಿಯನ್ನು ದಾಸರು ಸುಂದರವಾಗಿ ನಿರೂಪಿಸಿದ್ದಾರೆ :

‘ ಧನವ ಗಳಿಸಬೇಕಿಂತಹದು—ಈ
ಜನರಿಗೆ ಕಾಣಿಸದಂತಹದು ॥ ಪಲ್ಲ ॥
ಕೊಟ್ಟರೆ ತೀರದಂತಹದು—ತನ್ನ
ಬಿಟ್ಟು ಅಗಲಿ ಇರದಂತಹದು ।
ಕಟ್ಟಿದ ಗಂಟಿನ ಬಯಲೊಳಗಿಟ್ಟರೆ
ಮುಟ್ಟರು ಯಾರೂ ಅಂತಹದು ॥ ೧ ॥

ಕರ್ಮವನೋಡಿಸುವಂತಹದು—ಸದ್-
ಧರ್ಮವ ಮಾಡಿಸುವಂತಹದು ||
ನಿರ್ಮಲವಾಗಿಸಿ ಮನಸಿನೊಳಗೆ ನಿಜ-
ಧರ್ಮವ ತೋರಿಸುವಂತಹದು || ೨ ||

ಈ ಭಕ್ತಿ-ಜ್ಞಾನ-ವೈರಾಗ್ಯಗಳ ಸಾಧನೆಯ ದಾರಿಯಲ್ಲಿ ಹೆಣ್ಣು-ಗಂಡಿನ ಸಂಬಂಧವೆಂಬುದು ಒಂದು ದೊಡ್ಡ ಅಡ್ಡಗೋಡೆಯಾಗಿರುವುದು. ಎಂತಲೇ ದಾಸರು ಹೆಣ್ಣಿನ ಮೋಹಿಗಳನ್ನು ಎಚ್ಚರಿಸುವುದಕ್ಕಾಗಿ, ಸಾಮಾನ್ಯ ಸ್ತ್ರೀಯರ ಮನಶ್ಚೇಷ್ಟೆಗಳನ್ನು ಬಿತ್ತರಿಸಲು ತುಂಬ ಸ್ಪಷ್ಟವಾಣಿಯನ್ನು ಬಳಸಿದ್ದಾರೆ :

'ನಂಬಬೇಡ ನಾರಿಯರನು
ಹಂಬಲಿಸಿ ಹಾರಯಿಸಬೇಡ
ಅಂಬುಜಾಕ್ಷಿಯರೊಲುಮೆ ಬಯಲು-
ಡಂಬಕವೆಂದು ಕಾಣಿರೋ !'

ಪ್ರೀತಿ-ಪ್ರೇಮವಿವಾಹದ ಪಕ್ಷಪಾತಿಗಳು ದಾಸರ ಈ ಮಾತನ್ನು ಅಲ್ಲ-ಗಳೆದು ನುಡಿಯಬಹುದು; ಆದರೆ ಪ್ರೀತಿ-ಪ್ರೇಮಗಳ ಭ್ರಮೆಯಿಂದ ಮದುವೆ ಮಾಡಿಕೊಂಡು, ತಮ್ಮ ಸಂಸಾರವನ್ನು ಸಮರಕ್ಷೇತ್ರವನ್ನಾಗಿ ಮಾಡಿಕೊಂಡ ಜೀವನಾನುಭವಿಗಳು, ದಾಸರ ಈ ಮಾತಿನಲ್ಲಿಯ ವಾಸ್ತ-ವತೆಯನ್ನು ಒಪ್ಪದೆ ಇರಲಾರರು.

## ೧೩ ಗೃಹಿಣೀಜೀವನ ನೀತಿ

ಹೆಣ್ಣಿನ ಜೀವನದ ಆದರ್ಶಸಿದ್ಧಿ ಆಕೆಯ ಗೃಹಿಣೀತ್ವದಲ್ಲಿಯೆ—ಎಂಬ ಪರಂಪರೆಯಲ್ಲಿ ವಿಶ್ವಾಸವನ್ನಿರಿಸಿದ ದಾಸರು, ಗೃಹಿಣಿಯರಿಗಾಗಿಯೂ ನೀತಿ-ರೀತಿಗಳನ್ನು ಹೇಳದೆ ಬಿಟ್ಟಿಲ್ಲ.

'ಪತಿಭಕುತಿಯಿಲ್ಲದಿಹ ಸತಿಯ ಸಂಗ
ವ್ರತಗೆಟ್ಟು ಸುಖಪಡೆಯಲಿಲ್ಲವೋ ರಂಗ !'

ಎಂಬ ಹಾಡಿನಲ್ಲಿ ಶ್ರೀದಾಸರು, ಗೃಹಿಣಿಯ ಕರ್ತವ್ಯಗಳನ್ನು ವಿಡಂಬಕ ರೀತಿಯಲ್ಲಿಯೆ ವಿವರಿಸಿದ್ದಾರೆ :

'ಒಂದ ತಂದರೆ ಮನೆಗೆ ಹತ್ತಾಗಿ ಭಾವಿಸದೆ
ತಂದರೂ ಹತ್ತ ಮನೆಯೊಳಗೊಂದ ಮಾಡಿ ||

ಇಂದಿಗೆ ಇಲ್ಲವೆಂದು ಮುಖವ ತಿರುಹುತಲಿ ಮದ-
ದಿಂದ ಹೋಹಳು ನಾರಿ-ಬಲು ದೊಡ್ಡ ಮಾರಿ ॥
ಮಕ್ಕಳಿಗೆ ಇಡಲಿಲ್ಲ ಮರಿಗಳಿಗೆ ತೊಡಲಿಲ್ಲ
ಇಕ್ಕುವಡೆ ಬೆಳ್ಳಿ-ಬಂಗಾರವಿಲ್ಲ ॥
ಚಿಕ್ಕವಳು ನಾ ನಿನ್ನ ಕೈಪಿಡಿದು ಕೆಟ್ಟೆನೆಂಬ
ಮೂರ್ಖ ತೊತ್ತಿನ ಸಂಗ ಕುಲಕೆಲ್ಲ ಭಂಗ ॥ '

ದಾಸರ ಕಾಲದ ಸಮಾಜದಲ್ಲಿ ಅಸಂಸ್ಕೃತ ಸ್ತ್ರೀಯರ ಸಂಖ್ಯೆಯೇ ದೊಡ್ಡದಾಗಿರಬಹುದು. ಎಂತಲೇ ಅವರು ' ಸತಿಗೆ ಸ್ವಾತಂತ್ರ್ಯವ ಕೊಡ-ದಿರಿ, ನೀವು ಮತಿಗೆಟ್ಟು ಬಾಯನು ಬಿಡದಿರಿ ! ' ಎಂದು ಎಲ್ಲ ಲೌಕಿಕ-ರನ್ನೂ ಉದ್ದೇಶಿಸಿ ಹೇಳಿರುವರಲ್ಲದೆ, ಆ ಹಾಡಿನಲ್ಲಿ ಅಸಂಸ್ಕೃತ ಗೃಹಿಣಿಯರ ಸ್ವಭಾವ-ಗುಣಗಳನ್ನು ಯಥಾವತ್ತಾಗಿ ಚಿತ್ರಿಸಿರುವರು. ದಾಸರ ಈ ಕಟು-ಸತ್ಯ ಸ್ತ್ರೀಸ್ವಾತಂತ್ರ್ಯವಾದಿಗಳನ್ನು ತುಂಬ ಕೆರಳಿಸುವಂತಿದೆ, ಆದರೆ ದಾಸರು ಕಂಡುದನ್ನು ಕಂಡಂತೆ ಹೇಳುವುದಕ್ಕೆ ಹಿಂಜರಿಯುವವರಲ್ಲವೆಂಬುದನ್ನು ತಿಳುಹುವಂತಿದೆ.

## ೧೪ ಕೊನೆಯ ಮಾತುಗಳು

' ಅಜ್ಞಾನಿಗಳ ಕೂಡ ಅತಿ ಸ್ನೇಹದಕಿಂತ ಸುಜ್ಞಾನಿಗಳ ಕೂಡ ಜಗ-ಳವೇ ಲೇಸು ! ' ಎಂದು ಹೇಳಿದ ದಾಸರು, ಸತ್ಸಂಗದ ಆಗತ್ಯವನ್ನೂ ಪ್ರಯೋಜನವನ್ನೂ ಮನಮುಟ್ಟುವಂತೆ ಹೇಳಿದ್ದಾರೆ. ಇವರು ಹೇಳಿದ ಮಾನವನೀತಿ —ಸಾಮಾನ್ಯನೀತಿಗಳು, ತ್ರಿಕಾಲದಲ್ಲಿಯೂ ಸುಖ-ಸಮಾ-ಧಾನ ಜೀವನಕ್ಕೆ ಪ್ರಯೋಜನಕಾರಿಯೆನಿಸುವಂತಿವೆ. ಹರಿಭಕ್ತಿಸಿದ್ಧರಾದ ದಾಸರು, ತಮ್ಮ ಗುರಿಯನ್ನು ತಾವು ತಲ್ಪಿದೆವೆಂದು ಸುಮ್ಮನೆ ಕುಳಿತುಬಿಡ-ಲಿಲ್ಲ. ಲೋಕಸಂಗ್ರಹದ ಆಗತ್ಯಕರ್ತವ್ಯವನ್ನರಿತು, ತಮ್ಮ ಸಿದ್ಧಿಗೆ ಚ್ಯುತಿ-ಬಾರದಂತೆ, ಕನ್ನಡನಾಡಿನಲ್ಲಿ ವಿವಿಧ ಮುಖದಿಂದ ಕಾರ್ಯ ಮಾಡಿದ್ದಾರೆ. ಇಂದಿನ ಸುಸಂಸ್ಕೃತಿರಹಿತ ಜನಜೀವನವು, ತನ್ನ ವಿಷಮತೆ-ಪ್ರಕ್ಷುಬ್ಧತೆಗಳನ್ನು ಕಳೆದುಕೊಂಡು ಸುಗಮಮಾರ್ಗದಿಂದ ಸಾಗಬೇಕೆಂದರೆ, ಪುರಂದರದಾಸರು ಕನ್ನಡ ಜನತೆಗಿಂದು ಕೊಟ್ಟಿರುವ ನೀತಿಸಾಹಿತ್ಯದ ಪ್ರಯೋಜನವನ್ನು ಅದು

ಪೂರ್ಣವಾಗಿ ಪಡೆದುಕೊಳ್ಳಬೇಕು. ದಾಸರು ಹೇಳಿದ ದ್ವೈತಪ್ರಮೇಯಾತ್ಮಕ ಭಕ್ತಿಸಾಹಿತ್ಯ ಸರ್ವಪ್ರಯೋಜಕವೆನಿಸದೆ ಹೋದರೂ, ಅವರ ನೀತಿಸಾಹಿತ್ಯ ಸರ್ವದೇಶ, ಸರ್ವಕಾಲ, ಸರ್ವಜನಕ್ಕೂ ಉಪಯುಕ್ತವೆನಿಸುವಂತಹದಿದೆ.

ಈ 'ಲೋಕನೀತಿ' ಸಂಕಲನವು ಕನ್ನಡಿಗರ ಕೈಗಳಿಗೆ ಸಂದಂತೆಯೆ ಇನ್ನು ಕೆಲವೆ ದಿನಗಳಲ್ಲಿ ಕೊನೆಯ ಸಂಕಲನವಾದ 'ಸಂಕೀರ್ಣಸಂಗ್ರಹ'ವೂ ಸಂದಾಯವಾಗುವುದು. ನಮ್ಮ ಕೇಂದ್ರಸರಕಾರವು ನಮ್ಮ ಕಾರ್ಯದ ಮಹತಿಯನ್ನು ಅರಿತು, ಕರ್ತವ್ಯಬುದ್ಧಿಯಿಂದ ಮಾಡಿದ ಧನಸಹಾಯವು ನಮಗೆ ಧೈರ್ಯವನ್ನು ತಂದುಕೊಟ್ಟಿದೆ. ಅದು ದೊರೆಯದೆ ಹೋಗಿದ್ದರೆ, ನಮ್ಮ ಪ್ರಕಾಶನಕಾರ್ಯ ಇಷ್ಟೊಂದು ತ್ವರಿತಗತಿಯಲ್ಲಿ ನಡೆಯುತ್ತಿರಲಿಲ್ಲ. ದಿಲ್ಲಿಯ ಪಾರ್ಲಿಮೆಂಟಿನ ಸದಸ್ಯೆಯರಾಗಿರುವ ಶ್ರೀಮತಿ ಸರೋಜಿನಿ ಮಹಿಷಿಯವರಿಂದ ದೊರೆತ ನೆರವು ಅಷ್ಟಿಷ್ಟೆಂದು ಬಣ್ಣಿಸುವಂತಿಲ್ಲ. ಅವರು ಆತ್ಮೀಯಭಾವದಿಂದಲೇ ನಮಗೆ ಸಹಕಾರವಿತ್ತಿರುವರಾದರೂ, ಅವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳನ್ನು ಸಲ್ಲಿಸುವುದು ನಮ್ಮ ಉತ್ಸವ ಸಮಿತಿಯ ಕರ್ತವ್ಯವಾಗಿದೆ.

ಎಂದಿನಂತೆ ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟುದಕ್ಕಾಗಿ ಪ್ರತಿಭಾಮುದ್ರಣಾಲಯದ ಒಡೆಯರಾದ ಶ್ರೀ. ಭಾಲಚಂದ್ರ ಘಾಣೇಕರ ಮತ್ತು ಶ್ರೀ. ಮನೋಹರ ಘಾಣೇಕರ ಅವರಿಗೆ ನಮ್ಮ ಕೃತಜ್ಞತೆಯ ವಂದನೆಗಳನ್ನು ಸಲ್ಲಿಸುತ್ತೇವೆ. ಈ ಪುಸ್ತಕಪ್ರಕಟನೆಯ ಕಾರ್ಯದಲ್ಲಿ ಅವರು ಕೇವಲ ವ್ಯವಹಾರಿಗಳಾಗಿ ವರ್ತಿಸುತ್ತಿಲ್ಲ; ದಾಸರ ವಿಷಯಕವಾದ ಸೇವಾಬುದ್ಧಿಯಿಂದಲೇ ನಡೆದುಕೊಳ್ಳುತ್ತಿರುವುದು ಅವರ ಸತ್ಕಾರ್ಯಾಸಕ್ತಿಗೆ ಸಾಕ್ಷ್ಯವಾಗಿದೆ. ಈ ಲೋಕನೀತಿಯ ಗೀತಗಳು ಕನ್ನಡಿಗರ ಮನೆ-ಮನೆಯನ್ನೂ ಮನ-ಮನವನ್ನೂ ಮುಟ್ಟಬೇಕೆಂದು ನಮ್ಮ ಹಾರಯಿಕೆ.

ಧಾರವಾಡ
ತಾ. ೧೫-೪-೧೯೬೫
ಹನುಮಜ್ಜಯಂತಿ

**ಬೆಟಗೇರಿ ಕೃಷ್ಣಶರ್ಮಾ**
**ಬೆಂಗೇರಿ ಹುಚ್ಚರಾಯರು**

# ಪ್ರಕಾಶಕರ ಮಾತು

'ಲೋಕನೀತಿಯು' ಶ್ರೀಪುರಂದರದಾಸರ ಳನೆಯ ಶತಮಾನೋತ್ಸವ ಸಮಿತಿಯ ಜನೆಯ ಗ್ರಂಥವು. ಇದು ವಾಚಕರ ಕೈಸೇರುತ್ತಿರುವುದು ಸಂತೋಷದ ಸಂಗತಿಯು. ಕೈಯಲ್ಲಿ ಹಣವಿಲ್ಲದೆ ನಮ್ಮ ಸಮಿತಿಯು ಕೈಸೋತು ಕುಳಿತಾಗ, ನಮ್ಮ ಕೇಂದ್ರಸರಕಾರವು ನೆರವನ್ನು ನೀಡಲು ಮುಂದೆ ಬಂದುದು ದೈವೇಚ್ಛೆಯೇ ಸರಿ. ದಾಸರ ಸೇವೆಯನ್ನು ಸಮಿತಿಯ ಮುಖಾಂತರ ಪೂರ್ಣ ಮಾಡಿಸಬೇಕೆಂದು ಪರಮಾತ್ಮನ ಸಂಕಲ್ಪವಿದ್ದುದು ಇದರಿಂದ ಕಂಡುಬರುವುದು. ಈ ಕಾರ್ಯದಲ್ಲಿ ನೆರವಾದ ಕೇಂದ್ರ ಹಾಗು ಪ್ರಾಂತೀಯ ಸರಕಾರಗಳಿಗೂ ನೆರವನ್ನು ದೊರಕಿಸಲು ಸಹಾಯ ಮಾಡಿದ ಡಾ. ಶ್ರೀಮತಿ ಸರೋಜಿನಿ ಮಹಿಷಿ ಮೊದಲಾದವರಿಗೂ ಸಮಿತಿಯು ತನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಸಂಕಲನಕ್ಕೆ ಸಗತ್ಯವಾದ ಪಡಿಯಚ್ಚಿನ ಮೂಲಚಿತ್ರಗಳನ್ನು ಒದಗಿಸಿಕೊಟ್ಟುದಕ್ಕಾಗಿ, ಕ. ವಿ. ವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಗೂ, ಶ್ರೀ. ಕೆ. ಜಿ. ಹಲಸಗಿ ಅವರಿಗೂ ನಮ್ಮ ಅನಂತ ಧನ್ಯವಾದಗಳು.

ಪುರಂದದಾಸರು ಜನತೆಯ ಕುಂದು-ಕೊರತೆಗಳನ್ನು ತೋರಿಸಿ ಅವುಗಳನ್ನು ತಿದ್ದಲು ಮಾಡಿದ ಉಪದೇಶವು ಅಮೌಲ್ಯವಾಗಿದೆ; ಯಾವ ಕಾಲಕ್ಕೂ ಮಾರ್ಗದರ್ಶನವಾಗಿದೆ. ಅವರು ಸಮಾಜಕ್ಕೆ ಕೊಟ್ಟ ಎಚ್ಚರಿಕೆಗಳು ಸಮಾಜವನ್ನು ತಿದ್ದಲು ಬಹು ಉಪಯುಕ್ತವಾಗಿವೆ.

ಕವಿಸಾಟಿಯು ಇನ್ನೊಂದು ಗ್ರಂಥವನ್ನು ಜನತೆಗೆ ಅರ್ಪಿಸಿದರೆ, ಅದು ತಾನು ಸಂಕಲ್ಪಿಸಿದ ಕಾರ್ಯವನ್ನು ಪೂರ್ಣಮಾಡಿದಂತಾಯಿತು. ಈ ಕಾರ್ಯವೂ ಶೀಘ್ರವಾಗಿಯೇ ನೆರವೇರುವುದೆಂದು ವಾಚಕರಿಗೆ ತಿಳಿಸಲು ಇಚ್ಛಿಸುತ್ತೇವೆ. ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದುಕೊಟ್ಟ ನಾಡಿನ ಹಿರಿಯರಾದ ಡಾ. ವೆಂಕಟೇಶಾಚಾರ್ಯ ಅವರಿಗೆ ನಮ್ಮ ಸಮಿತಿಯು ಧನ್ಯವಾದಗಳನ್ನು ಅರ್ಪಿಸುತ್ತದೆ.

ತಾ. ೨೨-೪-೬೫ — ಬುರ್ಲಿ ಬಿಂದುಮಾಧವ

# ಆಧಾರಗ್ರಂಥಗಳು


೧ ಭಾರತೀಯ ಪ್ರಾಚೀನ ಚರಿತ್ರಕೋಶ (ಮರಾಠಿ)
ಸಿದ್ಧೇಶ್ವರಶಾಸ್ತ್ರಿ ಚಿತ್ರಾವ

೨ ಪುರಾಣನಾಮ ಚೂಡಾಮಣಿ (ಕನ್ನಡ) [ಪಾನ್ಯಂ ಸುಂದರಶಾಸ್ತ್ರಿ
ಬೆನಗಲ್ ರಾಮರಾಯರು]

೩ ಭಾಗವತ (ಕಲ್ಯಾಣಸಂಪುಟ)

೪ ಭಾರತ (ಕುಂಭಕೋಣಂ ಸಂಪುಟ)

೫ ಭಾರತ ತಾತ್ಪರ್ಯನಿರ್ಣಯ (ಉಡುಪಿ)

೬ ರಾಮಾಯಣ (ಕಲ್ಯಾಣಸಂಪುಟ)

೭ ತೀರ್ಥಾಂಕ (ಕಲ್ಯಾಣ)

೮ ಪುರಾಣಗಳು (ಇದರಲ್ಲಿಯ ಪ್ರಮಾಣಗಳನ್ನೆಲ್ಲ ಭಾರತೀಯ-
ಪ್ರಾಚೀನ ಚರಿತ್ರಕೋಶದಿಂದ ತೆಗೆದುಕೊಂಡಿದೆ)

೯ ವಾಯುಸ್ತುತಿ (ಶ್ರೀತ್ರಿವಿಕ್ರಮ ಪಂಡಿತಾಚಾರ್ಯಕೃತ)

೧೦ ಮಧ್ವವಿಜಯ (ಶ್ರೀನಾರಾಯಣ ಪಂಡಿತಾಚಾರ್ಯಕೃತ)

೧೧ ದ್ವಾದಶಸ್ತೋತ್ರ (ಶ್ರೀಮಧ್ವಾಚಾರ್ಯಕೃತ)

೧೨ ತಂತ್ರಸಾರ ( " " )

೧೩ ಭಗವದ್ಗೀತೆ

೧೪ ನಾರದ ಭಕ್ತಿಸೂತ್ರಗಳು

೧೫ ಸಂಗೀತ (South Indian Music 1—V. P. Sambamurti)

೧೬ ಕುಮಾರವ್ಯಾಸನ ಭಾರತ

೧೭ Epigraphia–Indica Vol XXXI July 1955

೧೮ ಹರಿಕಥಾಮೃತಸಾರ (ವರದೇಂದ್ರ ಹರಿದಾಸ ಸಾಹಿತ್ಯಮಂಡಳ
ಲಿಂಗಸೂಗೂರು)

೧೯ ವಿಜಯದಾಸರ ಸುಳಾದಿ " " "

೨೦ ದಶೋಪನಿಷತ್ತುಗಳು

# ಪರಿವಿಡಿ


| ಕ್ರಮಾಂಕ | ವಿಷಯ | ಪಾ. ನಂ. |
|---|---|---|
| ೧ | ಇಂಗ್ಲಿಷ್ ಮುನ್ನುಡಿ | i–xvi |
| ೨ | ಸಂಪಾದಕರ ಮಾತುಗಳು | ೧–೩೬ |
| ೪ | ಆಧಾರ ಗ್ರಂಥಗಳು | ೩೮ |
| ೩ | ಪ್ರಕಾಶಕರ ಮಾತು | ೩೭ |

* * * *

| | | |
|---|---|---|
| ೧ | ನಾಮಸ್ಮರಣನೀತಿ | ೧–೧೩ |
| ೨ | ಭಕ್ತಿಸಾಧನನೀತಿ | ೧೩–೨೯ |
| ೩ | ಸದಾಚಾರನೀತಿ | ೨೯–೫೧ |
| ೪ | ಮಾನವನೀತಿ<br>೧ ದೇಹ–ಕುಲ, ೨ ಮನಸ್ಸು, ೩ ಭಾಗ್ಯ, ೪ ಹೆಣ್ಣು, ೫ ಸಂಗ–ಸಹವಾಸ | ೨೫–೮೯ |
| ೫ | ಸಾಮಾನ್ಯನೀತಿ<br>೧ ಉಪದೇಶ, ೨ ಉಗ್ಗಡಣೆ | ೮೯–೧೨೭ |
| ೬ | ಪರ್ಯಾಯನೀತಿ | ೧೨೭–೧೩೨ |
| ೭ | ಮಂಗಳಂ | ೧೩೨ |


# ಪರಿಶಿಷ್ಟಗಳು


| | | |
|---|---|---|
| ೧ | ಶಬ್ದಾರ್ಥ, ಸಂದರ್ಭಕಥೆ, ವಿಶೇಷಟಿಪ್ಪಣಿ | ೧೩೩–೧೭೨ |
| ೨ | ಹಾಡುಗಳ ಅಕಾರಾದಿಸೂಚಿ | ೧೭೩–೧೭೭ |
| ೩ | ಪ್ರಮುಖಪದಗಳ ಸೂಚಿ | ೧೭೮–೧೮೮ |

## ಮಹಿಮಾಶಾಲಿ ಪುರಂದರದಾಸರು

ಗುರುಗಳೆಂದರೆ ಎನಗೆ ಇವರೆ ಗುರುಗಳು ಕಾಣೊ ।
ಧರೆಯೊಳು ಪುರಂದರದಾಸರೆ ಗುರುಗಳು ।
ಮರಳಿ ಮತ್ತೊಬ್ಬರುಂಟೆ ಕರುಣಿಸಿ ನೆನೆದಂತೆ ।
ವರಗಳಿತ್ತು ನಿತ್ಯ ಪರಿಪಾಲಿಸುವ ಹರಿ- ।
ಮರುತರ ಲೀಲೆಗಳ ಹಿರಿದಾಗಿ ತಿಳುಹಿ ವಿ- ।
ಸ್ತರವಾಗಿ ಎನ್ನಿಂದ ಬರೆಸಿದರು ಹರಿಚರಿತೆ ।
ದುರಿತಸಂದಣಿಯಲ್ಲಿ ಸೆರೆಬಿದ್ದು ತಪಿಸುತ- ।
ಲಿರೆ ನೋಡಿ ಲಾಲಿಸಿದರು ತಮ್ಮ ಕರುಣೆಯ ।
ಹರಿಯೆಳಮರಿ ತಾ ಋಕ್ಷನ ವದನದೊಳು ।
ಇರಲು ಎಳೆದು ಕಡೆಗೆ ತೆಗೆದಂತೆ ಇಂದಿಗಾ ।
ಗುರುಶಿರೋಮಣಿ ಎನ್ನ ದುರಿತದಿಂದ ಸೆಳೆದು ।
ಪರಮಾರ್ಥದ ಮಾರ್ಗದರುಹ ಮಾಡಿ ।
ಕರುಣಾಸಾಗರ ನಮ್ಮ ವಿಜಯವಿಟ್ಠಲನ ।
ಸ್ಮರಿಸುವುದಕೆ ಜ್ಞಾನವನ್ನೆ ತೋರಿದರು ।

* * * *

ಗುರುಪುರಂದರದಾಸರ ನೆರೆನಂಬಲು ।
ನಿರುತ ಕಲೆತು ವಿಜಯವಿಠಲನು ಒಲಿದ ।

—ಶ್ರೀವಿಜಯದಾಸರು



ತಿರುಪತಿಯ ಶ್ರೀನಿವಾಸಮೂರ್ತಿ

# ೧ ನಾಮಸ್ಮರಣನೀತಿ

## ೧

ರಾಗ—ಮಧ್ಯಮಾವತಿ    ತಾಳ—ಆದಿ

೧ ತಾಸು ಬಾರಿಸುತಿದೆ ಕೇಳಿ—ಹರಿದಾಸರೆಲ್ಲ |
ತಾಸು ಬಾರಿಸುತಿದೆ ಕೇಳಿ || ಪ ||

ಹಾಸುಮಂಚ ಸುಪ್ಪತ್ತಿಗೆಯಲಿ—ಹಗಲು-ಇರುಳು- |
ಹೇಸರಗತ್ತೆಯಂತೆ ಹೊರಳಿ—ಸ್ತ್ರೀಯರಗೂಡ- |
ಬೇಸರದೆ ನಿತ್ಯವು ಉರುಳಿ ||
ಈ ಪರಿ ಕಾಲವ ಕಳೆದೆಯೊ ಕಾಲ ಸ- |
ಮೀಪವಾಯಿತಾಯಿತು ಎಂದೀಗಲೆ || ೧ ||

ವೃದ್ಧ ಯೌವನ ಬಾಲಕಾಲ—ವಿವೇಕವಿಲ್ಲದ- |
ಬುದ್ಧಿಮಾಂದ್ಯವು ಹಲವು ಕಾಲ—ಆಹಾರಸಂಗ- |
ನಿದ್ರೆಯಿಂದಲಿ ಅತಿಲೋಲ ||
ಈಶನ ಭಜಕರ ಭಜಿಸದೆ ಮಾನುಷಾ- |
ಯುಷ್ಯವೆಲ್ಲವು ವ್ಯರ್ಥವಾಯಿತಾಯಿತೆಂದು || ೨ ||

ಕಂಡ ವಿಷಯವ ಕಾಮಿಸಿ—ಕಷ್ಟಪಡದೆ |
ತಾಂಡವ ಕೃಷ್ಣನ ಭಜಿಸಿ—ಪುಂಡನೆನಿಸದೆ |
ಭಂಡಧಾವತಿಯನು ತ್ಯಜಿಸಿ ||
ಪುಂಡರೀಕಾಕ್ಷ ಪುರಂದರವಿಠಲನ |
ಕೊಂಡುಭಜಿಸಿರೈಯ ಢಂ ಢಂ ಢಣ್ಣೆಂದು || ೩ ||

---

೧ ಖ—ಗ (B) ಪ್ರತಿಗಳಿಂದ ಆರಿಸಿದೆ.

೨

ರಾಗ—ಸೌರಾಷ್ಟ್ರ ತಾಳ—ಆದಿ

೧ ನಾರಾಯಣನೆಂಬ ನಾಮವ ನೀಮದಿ ನೆನೆಯುತಿರೆಚ್ಚರಿಕೆ ।
ನೀರ ಮೇಲಿನ ಗುಳ್ಳೆ ನಡೆಯೆಂಬ ಡಿಂಭವ ನಂಬದಿರೆಚ್ಚರಿಕೆ ॥ಪ॥

ಪರರು ಮಾಡಿದ ಪಾತಕವ ನಾಲಗೆಯೊಳುಚ್ಚರಿಸದಿರೆಚ್ಚರಿಕೆ ।
ಗುರುಹಿರಿಯರ ಸೇವೆಮಾಡದೆ ಉದರವ ಪೊರೆಯದಿರೆಚ್ಚರಿಕೆ ॥
ಹರಿದಿನದುಪವಾಸ ಇರುಳ ಜಾಗರವ ನೀ ಮರೆಯದಿರೆಚ್ಚರಿಕೆ ।
ನರಹರಿಯಂಘ್ರಿಯ ಸ್ಮರಿಸದೆ ನರಸ್ತುತಿ ತರವಲ್ಲ ಎಚ್ಚರಿಕೆ ॥ ೧ ॥

ಹೀನಮಾನಿನಿಯರ ಧ್ಯಾನಕಾನನದೊಳಿಳಿಯದಿರೆಚ್ಚರಿಕೆ ।
ನಾನೆಂಬ ಅಹಂಕಾರ ಮಾಡಿ ನರಕದೊಳು ನರಳಿದಿರೆಚ್ಚರಿಕೆ ॥
ಜಾಹ್ನವಿಸ್ನಾನ-ಸಂಧ್ಯಾನ-ಧ್ಯಾನವು ಸುಜ್ಞಾನ ಮುಂದೆಚ್ಚರಿಕೆ ।
ಜಾನಕಿರಮಣನ ಧ್ಯಾನವೆ ಧರ್ಮಸಂತಾನ ಮುಂದೆಚ್ಚರಿಕೆ ॥ ೨ ॥

ಮಡದಿ-ಮಕ್ಕಳೆಂಬ ಕಡುಮೋಹಕೆ ಸಿಲುಕಿ ಕೆಡಬೇಡವೆಚ್ಚರಿಕೆ ।
ನಡೆವಾಗ ನುಡಿವಾಗ ಗಿಡವೆಲ್ಲ ನೆಂಟರು ಕಡೆಗಿಲ್ಲ ಎಚ್ಚರಿಕೆ ॥
ಕೊಡುಗೈಯ ಮಾಡದೆ ಮಡಗಿದ ಧನ ಸಂಗಡ ಬಾರದೆಚ್ಚರಿಕೆ ।
ಒಡೆಯ ಶ್ರೀಪುರಂದರವಿಠಲನ ನೆನೆದು ನೀ ಕಡೆಹಾಯೊ ಎಚ್ಚರಿಕೆ ॥ ೩ ॥

೩

ರಾಗ—ಬಿಲಹರಿ ತಾಳ—ಅಟ

೨ ನಾರಾಯಣ ಎನ್ನಬಾರದೆ—ನಿಮ್ಮ- ।
ನಾಲಗೆಯೊಳು ಮುಳ್ಳುಮುರಿದಿಹುದೆ ? ॥ ಪ ॥

---

೧ ಆ (H) ಹ ಪ್ರತಿಗಳಿಂದ ಆರಿಸಿಕೊಂಡಿದೆ.

೨ ಓ ಪ್ರತಿಯಿಂದ ತೆಗೆದುಕೊಂಡಿದೆ.

ವಾರಣಾಸಿಗೆ ಪೋಗಿ ದೂರ ಬಳಲಲೇಕೆ ।
ನೀರ ಕಾವಡಿಯನು ಪೊತ್ತು ತಿರುಗಲೇಕೆ ॥
ಊರೂರು ತಪ್ಪದೆ ದೇಶಾಂತರವೇಕೆ ।
ದಾರಿಗೆ ಸಾಧನವಲ್ಲವೆ ಹರಿನಾಮ ? ॥ ೧ ॥

ನಿತ್ಯ ಉಪವಾಸವಿದ್ದು ಹಸಿದು ಬಳಲಲೇಕೆ ।
ಮತ್ತೆ ಚಳಿಯೊಳು ಗಂಗೆ ಮುಳುಗಲೇಕೆ ॥
ಹಸ್ತವ ಪಿಡಿದು ಮಾಡುವ ಜಪ-ತಪವೇಕೆ ।
ಮುಕ್ತಿಗೆ ಸಾಧನವಲ್ಲವೆ ಹರಿನಾಮ? ॥ ೨ ॥

ಸತಿ-ಸುತರನು ಬಿಟ್ಟು ಯತಿಗಳಾಶ್ರಮವೇಕೆ ।
ವ್ರತ-ಕೃಚ್ಛ್ರ ನೇಮ-ನಿಷ್ಠೆಗಳೇತಕೆ ॥
ಪೃಥಿವಿಯೊಳಗೆ ನಮ್ಮ ಪುರಂದರವಿಠಲನ ।
ಅತಿ ಭಕುತಿಯಿಂದೊಮ್ಮೆ ನೆನೆದರೆ ಸಾಲದೆ ॥ ೩ ॥

೪

ರಾಗ—ಪೂರ್ವಿ ತಾಳ—ರೂಪಕ

೧ ಮರೆಯಬೇಡ ಮನವೆ ನೀನು ಹರಿಯ ಸ್ಮರಣೆಯ ॥ ಪ ॥

ಯಾಗ-ಯಜ್ಞ ಮಾಡಲೇಕೆ ।
ಯೋಗಿ-ಯತಿಯು ಆಗಲೇಕೆ ॥
ನಾಗಶಯನ ನಾರದವಂದ್ಯನ ।
ಕೂಗಿ ಭಜನೆಮಾಡೊ ಬೇಗ ॥ ೧ ॥

ಸತಿಯು-ಸುತರು-ಹಿತರು ಎಂದು ।
ಮತಿಯು ಕೆಟ್ಟು ಕೆಡಲಿಬೇಡ ॥

೧ ಈ ಪದ್ಯವು ೬ ಪ್ರತಿಗಳಿಂದ ಆರಿಸಿಕೊಂಡಿದೆ.

ಗತಿಯು ತಪ್ಪಿ ಹೋಗುವಾಗ ।
ಸತಿಯು ಸುತರು ಬಾಹೋರೇನೊ ? ॥ ೨ ॥

ಹರಿಯ ಸ್ಮರಣೆ ಮಾತ್ರದಿಂದ ।
ದುರಿತಘೋರವೆಲ್ಲ ನಾಶ ॥
ಪರಮಪುರುಷ ಪುರಂದರವಿಠಲ ।
ಪರದ ಪದವಿ ಕೊಡುವನಯ್ಯ ॥ ೩ ॥

೫೫

ರಾಗ—ಪೂರ್ವಿ ತಾಳ—ರೂಪಕ

೧ ಹರಿಯ ನೆನೆಯಿರೊ—ನಮ್ಮ-
ಹರಿಯ ನೆನೆಯಿರೊ ॥ ಪ ॥

ಬರಿದೆ ಮಾತನಾಡಿ ಬಾಯ- ।
ಬರಡುಮಾಡಿ ಕೆಡಲುಬೇಡಿ ॥ ಅ ಪ ॥

ನಿತ್ಯವಿಲ್ಲದೀ ಶರೀರವ- ।
ನಿತ್ಯವೆಂದು ನೋಡಿರಯ್ಯ ॥
ಹೊತ್ತು ಕಳೆಯಬೇಡಿ ಕಾಲ- ।
ಮೃತ್ಯು ಬಾಹೊದೇಗಲೊ ॥ ೧ ॥

ಹಾಳುಹರಟೆ ಮಾಡಿ ಮನವ ।
ಬೀಳುಮಾಡಿಕೊಳ್ಳ ಬೇಡಿ ॥
ಏಳುದಿನದ ಕಥೆಯ ಕೇಳಿ ।
ಏಳಿರಯ್ಯ ವೈಕುಂಠಕೆ ॥ ೨ ॥

---

೧ ಓ ಪ್ರತಿಯಲ್ಲಿ ಮಾತ್ರ ಸಿಕ್ಕುತ್ತಿದೆ.

ಮೆಟ್ಟಿ ಪುಣ್ಯಕ್ಷೇತ್ರಗಳನು ।
ಸುಟ್ಟುಹೋಹುದು ಪಾಪ ಮನ- ॥
ಮುಟ್ಟಿ ಭಜಿಸಿರಯ್ಯ ಪುರಂದರ- ।
ವಿಟ್ಠಲನಾ ಚರಣವನ್ನು ॥ ೩ ॥

೬

ರಾಗ—ಶಂಕರಾಭರಣ ತಾಳ—ಅಟ

೧ ಹರಿಯೆನ್ನು ಹರಿಯೆನ್ನು ಹರಿಯೆನ್ನು ಪ್ರಾಣಿ ।
ಹರಿಯೆನ್ನದಿದ್ದರೆ ನರಹರಿಯಾಣೆ ॥ ಪ ॥

ಹೆಂಗುಸು ಮಕ್ಕಳು ಹೆರವರು ಪ್ರಾಣಿ ।
ಸಂಗಡ ಬರುವವರೊಬ್ಬರ ಕಾಣೆ ॥ ೧ ॥

ದಾನವಿಲ್ಲದ ದ್ರವ್ಯ ಗಳಿಸಿದೆ ಪ್ರಾಣಿ ।
ಪ್ರಾಣಹೋಗುವಾಗ ಕಾಣೆ ದುಗ್ಗಾಣಿ ॥ ೨ ॥

ನೀರಮೇಲಿನ ಗುಳ್ಳೆ ಸಂಸಾರ ಪ್ರಾಣಿ ।
ಸಾರಿದ ಪುರಂದರವಿಠಲನ ವಾಣಿ ॥ ೩ ॥

೭

ರಾಗ—ಕಲ್ಯಾಣಿ ತಾಳ—ಆದಿ

೨ ರಾಮ ರಾಮ ರಾಮ ಸೀತಾರಾಮ ಎನ್ನಿರೊ ॥ ಪ ॥
ಇಂದ್ರಿಯಂಗಳೆಲ್ಲ ಕೂಡಿ ।
ಬಂದು ತನುವ ಮುಸುಕಲು ॥

೧ ಆ (I) ಪ್ರತಿಯಿಂದ ತೆಗೆದುಕೊಂಡಿದೆ.
೨ ಆ (I) ಪ್ರತಿಯಿಂದ ತೆಗೆದುಕೊಂಡಿದೆ.

ಸಿಂಧುಸುತೆಯ ಪತಿಯ ಧ್ಯಾನ ।
ಎಂದಿಗಲ್ಲಿ ದೊರೆಯದೊ ॥ ೧ ॥

ಭರದಿ ಯಮನ ಭಟರಾಗಲೆ ।
ಹೊರಡು ಎಂದು ಮೆಟ್ಟಿ ತುಳಿಯೆ ॥
ಕೊರಳಿಗಾತ್ಮ ಸೇರಿದಾಗ ।
ಹರಿಯ ಧ್ಯಾನ ದೊರೆಯದೊ ॥ ೨ ॥

ದೋಷ-ಕ್ಲೇಶ-ದುಃಖವೆಂಬ ।
ಶ್ಲೇಷ್ಮದಲ್ಲಿ ಸಿಕ್ಕಿ ಇರಲು ॥
ವಾಸುದೇವ ಕೃಷ್ಣನೆಂಬು- ।
ದಾಸಮಯಕ್ಕೆ ದೊರೆಯದೊ ॥ ೩ ॥

ಸಿಂಗರವಾದ ದೇಹವೆಲ್ಲ ।
ಅಂಗವಳಿದು ಮುರಿದುಬೀಳೆ ॥
ಅಂಗಳಿಗಾತ್ಮ ಸೇರಿದಾಗ ।
ರಂಗನ ಧ್ಯಾನವು ದೊರೆಯದೊ ॥ ೪ ॥

ಕೆಟ್ಟ ಕೆಟ್ಟರಲ್ಲೊ ಬರಿದೆ ।
ಕಟ್ಟಕಡೆಯಲ್ಲಿ ಕಾಯ ॥
ಬಿಟ್ಟುಹೋಗುವಾಗ ಪುರಂದರ- ।
ವಿಟ್ಠಲ ಧ್ಯಾನ ದೊರೆಯದೊ ॥ ೫ ॥

## ೮

ರಾಗ—ಯಮುನಾಕಲ್ಯಾಣಿ ತಾಳ—ಆದಿ

೧ ಹರಿಕಥಾಶ್ರವಣಮಾಡೊ—ನಿರಂತರ ।
ಪರಗತಿಗಿದು ನಿರ್ಧಾರ ನೋಡೊ ॥ ಪ ॥

---

೧ ಝು (೧೦) ಪ್ರತಿಯಿಂದ ತೆಗೆದುಕೊಂಡಿದೆ.

ಸರಸಿಜನಾಭನ ಸರ್ವದಾ ಹೊಗಳುತ ।
ದುರಿತ ದೂರಕೀಡಾಡೊ—ಮನುಜಾ ॥ ೧ ॥

ಜ್ಞಾನ-ಭಕುತಿ-ವೈರಾಗ್ಯವೀವ ನಮ್ಮ ।
ಆನಂದತೀರ್ಥರ ಪಾಡೊ—ಮನುಜಾ ॥ ೨ ॥

ಪರಮಪುರುಷ ಶ್ರೀಪುರಂದರವಿಠಲನ ।
ಚರಣಕಮಲಗಳ ಕೂಡೊ—ಮನುಜಾ ॥ ೩ ॥

## ೯

### ಉಗಾಭೋಗ

೧ ನೀರಡಿಸಿ ಜಾಹ್ನವಿಯ ತೀರದಲಿ ಬಂದು ।
ಬಾವಿಯ ನೀರ ಕುಡಿಯುವ ಮಾನವರುಂಟೆ ? ।
ಹರಿಯ ಸಿರಿಚರಣವಿರಲು ।
ಬರಡು ದೈವಗಳನ್ನೇಕೆ ಭಜಿಸುವೆ ಮನವೆ ? ।
ಸಿರಿರಮಣ ಬೇಲೂರು ಚೆನ್ನಿಗರಾಯ ।
ಪುರಂದರವಿಠಲನಿರಲು ।
ಬರಡುದೈವಗಳನ್ನೇಕೆ ಭಜಿಸುವೆ ?॥

## ೧೦

ರಾಗ—ಶಂಕರಾಭರಣ ತಾಳ—ಏಕ

೨ ಕಾರಿಗೆಯ ಮಾಡೋಣ ಸಜ್ಜನರು ಬನ್ನಿರೊ ।
ನಾರಾಯಣನ ದಿವ್ಯನಾಮ ಭಾರಿಕೊಂಬ ಬನ್ನಿರೊ ॥ ಪ ॥

ಹೃದಯವೆಂಬ ಚೀಲದೊಳಗೆ ಹರಿಯ ನಾಮ ಹೊಸ್ನಹಾಕಿ ।
ತುದಿನಾಲಿಗೆಯಿಂದ ತೆಗೆದು ವೆಚ್ಚವನ್ನು ಮಾಡಿರೊ ॥ ೧ ॥

೧ ಧ ಪ್ರತಿಯಿಂದ ಆರಿಸಿದೆ.
೨ ಅ (ಋಡಿ ೫) ಇಂದ ಆರಿಸಿದೆ. ಕೊನೆಯ ನುಡಿ ದೊರೆತಿಲ್ಲ.

ಜ್ಞಾನವೆಂಬ ಎತ್ತಿನಲ್ಲಿ ಕರುಣವೆಂಬ ಗೋಣಿಹಾಕಿ ।
ದಾನ-ಧರ್ಮವೆಂಬ ದವಸ ಸರಕುಗಳ ತುಂಬಿರೊ ॥ ೨ ॥

ನೇಮ-ನಿತ್ಯವೆಂಬ ಗಟ್ಟಿ ನಡುವಿನಲ್ಲಿ ಬಿಗಿದು ಸುತ್ತಿ ।
ಪ್ರೇಮವೆಂಬ ಚೊಕ್ಕ ಬುತ್ತಿ ಸೆರಗಿನಲ್ಲಿ ಕಟ್ಟಿರೊ ॥ ೩ ॥

ಕಾವಲಿಗರೈವರನ್ನು ಕಾಣದಂತೆ ಟಕ್ಕುದೋರಿ ।
ಭಾವವೆಂಬ ಮಾರ್ಗದಲ್ಲಿ ಬೇಗಬೇಗ ಬನ್ನಿರೊ ॥ ೪ ॥

## ೧೧

ರಾಗ—ರೇಗುಪ್ತಿ ತಾಳ—ತ್ರಿವುಡೆ

೧ ಹರಿಯ ನೆನೆಯದ--ನರಜನ್ಮವೇಕೆ ?—ಶ್ರೀ- ।
ಹರಿಯ ಕೊಂಡಾಡದ ನಾಲಗೆಯಿನ್ನೇಕೆ ॥ ಪ ॥

ಸತ್ಯ-ಶೌಚವಿಲ್ಲದ ಆಚಾರವೇಕೆ ? ।
ಚಿತ್ತಶುದ್ಧಿಯಿಲ್ಲದ ಜ್ಞಾನವಿನ್ನೇಕೆ ? ॥
ಭಕ್ತಿ-ಭಾವವಿಲ್ಲದ ದೇವಪೂಜೆ ಏಕೆ ? ।
ಉತ್ತಮರಿಲ್ಲದ ಸಭೆಯು ಇನ್ನೇಕೆ ? ॥ ೧ ॥

ಕ್ರೋಧವ ಬಿಡದಿಹ ಸಂನ್ಯಾಸವೇಕೆ ? ।
ಆದರವಿಲ್ಲದ ಅಮೃತಾನ್ನವೇಕೆ ? ॥
ವೇದ-ಶಾಸ್ತ್ರವಿಲ್ಲದ ವಿಪ್ರತನವೇಕೆ ? ।
ಕಾದಲಂಜುವನಿಗೆ ಕ್ಷಾತ್ರ ತಾನೇಕೆ ? ॥ ೨ ॥

ಸಾಲದಟ್ಟುಳಿಯೆಂಬ ಸಂಸಾರವೇಕೆ ? ।
ಬಾಲಕರಿಲ್ಲದ ಭಾಗ್ಯವಿನ್ನೇಕೆ ? ॥
ವೇಳೆಗೆ ಒದಗದ ನಂಟರಿನ್ನೇಕೆ ? ಅನು- ।
ಕೂಲವಿಲ್ಲದ-ಸತಿಯ ಸಂಗವೇಕೆ ॥ ೩ ॥

---

೧ ಕ. ವಿ. ವಿ. ತಾಳೆಗರಿ (೧೮೫೬–೧೭೫೦) ಪ್ರತಿಯಿಂದ ಆರಿಸಿಕೊಂಡಿದೆ.
ಅ (ಬಿಡಿ ೫) ಇ ಖ ೧ (೭) ಪ್ರತಿಗಳಲ್ಲಿ ವಿಕಾರಗಳು ತುಂಬಿವೆ.

ಮಾತೆ-ಪಿತರ ತೊರೆದ ಮಕ್ಕಳಿನ್ನೇಕೆ ? ।
ಮಾತುಕೇಳದ ಮಗನ ಗೊಡವೆ ಇನ್ನೇಕೆ ? ॥
ನೀತಿ ತಪ್ಪಿದ ದೊರೆಯ ಸೇವೆ ಇನ್ನೇಕೆ ? ಅ- ।
ನಾಥನಾಗಿರುವಗೆ ಕೋಪವಿನ್ನೇಕೆ ? ॥ ೪ ॥

ಅಳಿದುಳಿದಿಹ ಮಕ್ಕಳುಗಳಿನ್ನೇಕೆ ? ।
ತಿಳಿದು ಬುದ್ಧಿಯ ಹೇಳದ ಗುರುತನವೇಕೆ ? ॥
ನಳಿನನಾಭ ಶ್ರೀಪುರಂದರವಿಠಲನ ।
ಚೆಲುವ ಮೂರುತಿಯ ಕಾಣದ ಕಂಗಳೇಕೆ ? ॥ ೫ ॥

## ೧೨

ರಾಗ—ಕಲ್ಯಾಣಿ ತಾಳ—ಝಂಪೆ

೧ ಹರಿಕಥಾಮೃತ ಸವಿಯು ಹರಿದಾಸರಲ್ಲದೆ ।
ದುರುಳ ಮಾನವರದರ ಪರಿ ಬಲ್ಲರೇನಯ್ಯ ॥ ಪ ॥

ಸ್ತನ್ಯಪಾನದ ರುಚಿಯು ಚಿಣ್ಣರು ಬಲ್ಲರಲ್ಲದೆ ।
ಮಣ್ಣಬೊಂಬೆಗಳದರ ಬಗೆ ಬಲ್ಲುವೆ? ॥
ಅನ್ನಪಾನದ ರುಚಿಯು ಕೊನೆನಾಲಗೆಯಲ್ಲದೆ ।
ಅಣಿಮಾಡಿಕೊಡುವ ಆ ಕರ ಬಲ್ಲುದೇನಯ್ಯ ? ॥ ೧ ॥

ಘನನೀರದಾರ್ಭಟಕೆ ನವಿಲುಗಳು ನಲಿವಂತೆ ।
ಕಾವುಕಾವೆಂಬ ಕಾಕವು ಬಲ್ಲುದೆ ? ॥
ದಿನಕರನುದಯಿಸಲು ಅರಳುವಬ್ಜಗಳಂತೆ ।
ದಿವಸಾಂಧಪಕ್ಷಿಗಳು ಬಗೆಬಲ್ಲುವೇನಯ್ಯ ? ॥ ೨ ॥

೧ ಆ (ಪ) ಪ್ರತಿಯಿಂದ ಆರಿಸಿಕೊಂಡಿದೆ.

ಮೊಲ್ಲೆಮಲ್ಲಿಗೆ ಮುಡಿಯಬಲ್ಲ ಮಾನವರಂತೆ ।
ಭಲ್ಲೂಕಗಳು ಅದರ ಬಗೆ ಬಲ್ಲುವೆ ? ॥
ಫುಲ್ಲಾಕ್ಷ ಶ್ರೀಪುರಂದರವಿಠಲರಾಯನನು ।
ಬಲ್ಲ ಮಾನವರಲ್ಲದೆಲ್ಲರೂ ಬಲ್ಲರೆ ? ॥ ೩ ॥

## ೧೩

### ಉಗಾಭೋಗ

೧ ಸುಖಕೆ ತಾನಾರೊ ದುಃಖಕೆ ತಾನಾರೊ ।
ಸುಖ-ದುಃಖವೆರಡೂ ಶ್ರೀಹರಿಯ ಅಧೀನವಲ್ಲದೆ ।
ಸಾಗರ ಸಡ್ಡೆಯ ಮಾಡಿ ಧರೆಯ ಕೂರಿಗೆ ಮಾಡಿ ।
ಶಿವ-ಬ್ರಹ್ಮ ಎಂಬ ಎರಡೆತ್ತ ಹೂಡಿ ।
ಊಳುವಾತ ಇಂದ್ರನು ಬೆಳಸಿದ ಚಂದ್ರನು ।
ಕಳೆಯತೆಗೆಯುವವ ಯಮಧರ್ಮನು ।
ಬಿತ್ತಿದಾತ ಬೆಳಸನು ಕೊಯ್ದು ತಾನೊಯ್ದನು ।
ದುಃಖವೇತಕೆ ಬಾರೊ ಪುರಂದರವಿಠಲ ॥ ೧ ॥

## ೧೪

ರಾಗ—ಕಾಂಬೋದಿ ತಾಳ—ಝಂಪೆ

೨ ಹರಿಭಕುತಿ ಸುಖವು ಅನುಭವಿಗಲ್ಲದೆ ಮಿಕ್ಕ- ।
ನರಗುರಿಗಳದರ ಸ್ವಾದವ ಬಲ್ಲವೆ ? ॥ ಪ ॥

---

೧ ಅ (೧೫) ಪ್ರತಿಯಿಂದ ಆರಿಸಿಕೊಂಡಿದೆ.
೨ ಥ ಪ್ರತಿಯಿಂದ ತೆಗೆದುಕೊಂಡಿದೆ.

ಎಸೆವ ತೆಂಗಿನಕಾಯಿ ಎತ್ತು ಮೆಲಬಲ್ಲುದೆ ? ।
ರಸಭರಿತ ಖರ್ಜೂರ ಕುರಿ ಮೆಲ್ಲಬಲ್ಲುದೆ ? ॥
ಹಸು ಕರೆದ ಪಾಲ ಸವಿಸುಖಿಗಳಿಗೆ ಅಲ್ಲದೆ ।
ಕಸದಿ ವಸಿಸುವ ಉಣ್ಣೆಗಳು ಬಲ್ಲವೆ ? ॥ ೧ ॥

ಸರಸಿಜದ ಪರಿಮಳವ ಮಧುಕರನು ಅರಿವಂತೆ ।
ನಿರುತ ಬಳಿಯೊಳಗಿರುವ ಕಪ್ಪೆಗಳು ಬಲ್ಲುವೆ ॥
ಸರಸ ಪಂಚಾಮೃತವ ಶ್ವಾನ ತಾ ಬಲ್ಲುದೆ ? ।
ಹರಿಕಥಾಶ್ರವಣಸುಖ ಕತ್ತೆಯದು ಬಲ್ಲುದೆ ? ॥ ೨ ॥

ಅಂಧ ದೀಪದ ಬೆಳಕ ಮೂಢ ಮಾತಿನ ಸವಿಯ ।
ಮಂದ ಬಧಿರನು ಗಾಡ ಕೇಳಿ ಸುಖಿಸುವರೆ ? ॥
ಅಂದ ಮುತ್ತಿನದಂಡೆ ಕಪಿಗಳಿಡಬಲ್ಲುವೆ ? ।
ಮಂದಮತಿ ಪುರಂದರವಿಠಲನನು ಬಲ್ಲನೆ ? ॥ ೩ ॥

## ೧೫

ರಾಗ—ಕಾಂಬೋದಿ ತಾಳ—ಅಟ

[೧] ವರುಷ ಕಾರಣವಿಲ್ಲ ಹರಿಭಜನೆಗೆ ।
ಅರಿತ ಸಜ್ಜನರೆಲ್ಲ ಕೇಳಿ ಸಮ್ಮುದದಿ ॥ ಪ ॥

ತರಳತನದಲಿ ಕಂಡ ಹರಿಯ ಧ್ರುವರಾಯನು ।
ಹಿರಿಯ ತಾಪಸವಸಿಷ್ಠ ಕಂಡನೇನೊ ?॥
ತರಳ ಪ್ರಹ್ಲಾದ ನರಹರಿಯನು ತಾ ಕಂಡ ।
ಹಿರಿಯನವನಪ್ಪ ತಾ ಮರೆಯಲಿಲ್ಲವೇನೊ ? ॥ ೧ ॥

ಹಿರಿದಾಗಿ ಬಹುಕಾಲ ಮರದ ಮೇಲ್ಬಾಳುವ ।
ಇರುಳುಗಣ್ಣಿನ ಗೂಗೆ ತಾ ದೊಡ್ಡದೆ ? ॥

೧ ಕ ಪ್ರತಿಯಿಂದ ತೆಗೆದುಕೊಂಡಿದೆ.

ಮರಿಯಾದ ಅರಗಿಣಿ ಹರಿಕೃಷ್ಣ ಎಂದೊದರೆ ।
ಮರಿ ದೊಡ್ಡದೆಂತೆಂದು ಪೇಳುವರು ಬುಧರು ॥ ೨ ॥

ಸರುವದಾ ಒದರುವರು ಅರಣ್ಯವಾಸಿಗಳು ।
ಮರದಡಿಗೆ ಬಿದ್ದ ಎಲೆಗಳ ತಿನ್ನುತ ॥
ಪರಮಪಾತಕಿ ಅಜಾಮಿಳನು ನಾರಗ ಎನಲು ।
ಭರದಿಂದ ಸಲಹಿದನು ಪುರಂದರವಿಠಲ ॥ ೩ ॥

೧೬

ರಾಗ—ರೇಗುಪ್ತಿ ತಾಳ—ಅಟ

೧ ವಂದಿಸಿದವರೆ ಧನ್ಯರು—ನಮ್ಮ- ।
ಇಂದಿರಾಪತಿಗಡ್ಡಬೀಳುತಲೊಮ್ಮೆ ॥ ಪ ॥

ಒಂದೊಂದು ಸ್ತೋತ್ರದಿ ಒಂದೊಂದು ಮಂತ್ರದಿ ।
ಒಂದೊಂದು ನಾಮವ ನೆನೆಯುತಲಿ ॥
ಮಂದರೋದ್ಧರನನು ಕುಂದದೆ ಪೂಜಿಸಿ ।
ವಂದಿಸುವಾನಂದದಿಂದ ॥ ೧ ॥

ಬಿಟ್ಟು ಲಜ್ಜೆಯನು ದೃಷ್ಟಿಸಿ ನೋಡುತ ।
ವಿಟ್ಠಲ ವಿಟ್ಠಲ ಎನುತ ಮನ- ॥
ಮುಟ್ಟಿ ಮಾಡುವ ಭಕ್ತಿ-ಸ್ತೋತ್ರ-ಸ್ತುತಿಗಳಿಂದ ।
ಅಷ್ಟಾಂಗದಲಿ ವಂದನೆಯ ಮಾಡುತಲಿ ॥ ೨ ॥

ಸಿರಿಲಕ್ಷ್ಮಿಪತಿ ಶರಣಾಗತರನು ।
ಕರುಣಿಸೆಂದೆನುತೆ ಕರವ ಮುಗಿದು ॥

---

೧ ಆ (ಹ) ಪ್ರತಿಯಿಂದ ತೆಗೆದುಕೊಂಡಿದೆ.

ಹರುಷಪುಳಕದಿಂದ ಹೊರುತ ದೇಹವನು ಶ್ರೀ- ।
ಪುರಂದರವಿಟ್ಠಲರಾಯನ ಚರಣಕೆ ॥ ೩ ॥

## ೨ ಭಕ್ತಿಸಾಧನನೀತಿ

### ೧೭

ರಾಗ—ಕಾಂಬೋದಿ ತಾಳ—ಅಟ

೧ ದಾಸನೆಂತಾಗುವೆನು ಧರೆಯೊಳಗೆ ನಾನು ।
ವಾಸುದೇವನಲಿ ಲೇಶ ಭಕುತಿಯು ಕಾಣೆ ॥ ಪ ॥

ಗೂಟನಾಮವ ಹೊಡೆದು ಗುಂಡುತಂಬಿಗೆ ಹಿಡಿದು ।
ಗೋಟಂಚುಧೋತರ ಮಡಿಯನುಟ್ಟು ॥
ದಾಟುಗಾಲಿಡುತ ನಾ ಧರೆಯೊಳಗೆ ಬರಲೆನ್ನ ।
ಬೂಟಕತನ ನೋಡಿ ಭ್ರಮಿಸದಿರಿ ಜನರೆ ॥ ೧ ॥

ಅರ್ಥದಲ್ಲಿಯೆ ಮನಸು ಆಸಕ್ತವಾಗಿದ್ದು ।
ವ್ಯರ್ಥವಾಯಿತು ಜನ್ಮ ವಸುಧೆಯೊಳು ॥
ಆರ್ತಿಯಿಂದಲಿ ಹರಿಯ ಅರ್ಚಿಸಿದ್ದಿಲ್ಲ ನಾ ।
ಸತ್ಯ-ಶೌಚಗಳರಿಯೆ ಸಜ್ಜನರು ಕೇಳಿ ॥ ೨ ॥

ಇಂದಿರೇಶನ ಪೂಜೆ ಎಂದು ಮಾಡಿದ್ದಿಲ್ಲ ।
ಸಂಧ್ಯಾನ-ಜಪ-ತಪವೊಂದನರಿಯೆ ॥
ಒಂದು ಸಾಧನ ಕಾಣೆ ಪುರಂದರವಿಠಲನ ।
ದ್ವಂದ್ವಪಾದವ ನಂಬಿ ಅರಿತು ಭಜಿಸಿದಲಿ ॥ ೩ ॥

೧ ಕ ಪ್ರತಿಯಿಂದ ತೆಗೆದುಕೊಂಡಿದೆ.

೯೮

ರಾಗ—ದರಬಾರ್ ತಾಳ—ಆದಿ

೧ ತನುವ ನಂಬಲುಬೇಡ ಜೀವವೆ ॥ ಪ ॥

ಅನುವಾಗಿ ನಿನ್ನಂಗಕೆ ಕೆಲಕಾಲ ತೋರುವುದು ।
ಅನುವಿಲ್ಲದಾಗ ಈ ತನುವೆ ನಿನಗೆ ವೈರಿ ॥ ಅ ಪ ॥

ಜರೆ-ಮರಣಗಳಿಂದ ಭರಿತವಾದುದು ಕಾಯ ।
ಸ್ಥಿರವೆಂದು ನಂಬಿ ನೀ ಮರುಳಾಗಬೇಡ ॥ ೧ ॥

ಧನ-ಧಾನ್ಯ ಪಶು-ಪತ್ನಿ ಸ್ಥಿರವೆಂದು ತಿಳಿದು ।
ಮನುಮಥನಯ್ಯನ ಮರೆಯದೆ ಮನವೆ ॥ ೨ ॥

ಶರಣೆಂದರೆ ಕಾವ ಗರುಡಕೇತನ ನಮ್ಮ ।
ಪುರಂದರವಿಠಲನ ಮರೆಯದೆ ಮನವೆ ॥ ೩ ॥

೯೯

ರಾಗ—ಭೈರವಿ ತಾಳ—ತ್ರಿವುಡೆ

೨ ಕೆಟ್ಟೆನಲ್ಲೊ ಹರಿಯೆ ।
ಸಿಟ್ಟುಮಾಡಿ ಎನ್ನ ಬಿಟ್ಟು ಕಳೆಯಬೇಡ ॥ ಪ ॥

ಬಂದೆನು ನಾ ತಂದೆ-ತಾಯಿಗಳುದರದಿ ।
ಒಂದನೂ ಅರಿಯದೆ ಬಾಲಕತನದೊಳು ॥
ಮುಂದುವರಿದ ಯೌವನದೊಳು ಸತಿ-ಸುತ- ।
ರಂದವ ನೋಡುತ ನಿನ್ನ ನಾ ಮರೆತೆನೊ ॥ ೧ ॥

---

೧ ಓ ಪ್ರತಿಯಿಂದ ತೆಗೆದುಕೊಂಡಿದೆ.

೨ ಶ (I) ಪ್ರತಿಯಿಂದ ತೆಗೆದುಕೊಂಡಿದೆ.

ಸ್ನಾನ-ಸಂಧ್ಯಾನವು ಹೀನವಾಯಿತು ಬಹು- ।
ಮಾನವಿಲ್ಲದೆ ಕುಲಹೀನರಾಶ್ರಯದಿಂದ ॥
ಜ್ಞಾನಿಗಳೊಡನಾಟವಿಲ್ಲದೆ ಮನದೊಳು ।
ದಾನ-ಧರ್ಮದ ಬಟ್ಟೆಯೆಂತೆಂದು ಮರೆತೆನು ॥ ೨ ॥

ಮೊದಲೆ ಬುದ್ಧಿಯು ಹೀನ ಅದರೊಳು ವೃದ್ಧಾಪ್ಯ ।
ಕದನವು ದಶದಿಕ್ಕಿನುದಯದ ರಾಯರ ॥
ಎದೆನೀರು ಬತ್ತಿತು ಅದರಿಂದ ನಿನ್ನಯ ।
ಪದಪದ್ಮಯುಗಳದ ತುದಿಯ ನಾ ಮರೆತೆನು ॥ ೩ ॥

ಮೂಢನಾದೆನು ನಿನ್ನ ಬೇಡಿಕೊಳ್ಳದೆ ನಾನು ।
ಕಾಡೊಳಗಾಡುವ ಮೃಗದಂತೆ ಜೀವಿಸಿ ॥
ಗೂಡೊಳಗಿರುತಿಹ ಗೂಬೆಯ ತೆರನಂತೆ ।
ಮಾಡದೆ ನಿನ್ನಯ ಸ್ಮರಣೆಯ ಮರೆತೆನು ॥ ೪ ॥

ಬುದ್ಧಿಹೀನನು ನಾನು ಉದ್ಧರಿಸೆಲೊ ದೇವ ।
ಮುದ್ದು ಶ್ರೀಪುರಂದರವಿಠಲನೆನ್ನ ॥
ಬುದ್ಧಿಯೊಳಡಗಿಯೆ ತಿದ್ದಿಟ್ಟು ನಡೆಸಯ್ಯ ।
ಪೊದ್ದುವೆ ನಿನ್ನಯ ಚರಣಾರವಿಂದವ ॥ ೫ ॥

೨೦

ರಾಗ—ಮಧ್ಯಮಾವತಿ ತಾಳ—ಅಟ

೧ ಎಂತಹುದೊ ನಿನ್ನ ಭಕುತಿ ? ।
ಸಂತತ ನಿನ್ನ ದಾಸರ ಸಂಗವಿರದೆನಗೆ ॥ ಪ ॥

೧ ಓ ಪ್ರತಿಯಿಂದ ತೆಗೆದುಕೊಂಡಿದೆ.

ವೃಣವನಾಶಿಪ ಕುರುಡುನೊಣ ವೊಸರ ಕಂಡಂತೆ ।
ಧನಿಕರ ಮನೆಗೆ ಕ್ಷಣಕ್ಷಣಕೆ ಪೋಗಿ ॥
ತನುಬಾಗಿ ತುಟಿಯೊಣಗಿ ಅಣಕನುಡಿ ಕೇಳ್ವ ಕೃ- ।
ಪಣ ಮನಕೆ ಎಂತಹುದು ನಿನ್ನಯ ಭಕುತಿ ॥ ೧ ॥

ಅಡಿಯಾಡಿ ಮುಖಬಾಡಿ ನುಡಿಯಡಗಿ ಬಡವನೆಂದು ।
ಒಡಲ ತೋರಿಸಿದೆನೊ ಕಡುದೈನ್ಯದಿ ॥
ಒಡೆಯ ನೀನಹುದೆಂದು ಮಡದಿ-ಮಕ್ಕಳಿಗೆ ಹೆಸ- ।
ರಿಡುವ ಅವರಡಿಗೆ ಎರಗುವನ ಮನಕೆ ॥ ೨ ॥

ಹೋಗಿಬಾರ್ರೈ ಎಂದು ಅತಿಗಳೆದರು ತಲೆ- ।
ಬಾಗಿ ನಿಂತು ಅಲ್ಲಿ ಮೌನವಾಗಿ ॥
ಓಗರಕೆ ಮನೆಮನೆ ತಪ್ಪದೆ ತಿರುಗುವ ।
ಜೋಗಿಯ ಕೈಯಕೋಡಗದಂಥ ಮನಕೆ ॥ ೩ ॥

ಅನ್ನವ ತೋರಿ ಚಿಟಕಿರಿಯೆ ಬಾಲವ ಬೀಸಿ ।
ಕುನ್ನಿ ಸುಳಿದಾಡಿ ಕಾಲ್ಗೆರಗುವ ತೆರದಿ ॥
ಹೆಣ್ಣಿನಾಶೆಗೆ ಬಾಯಬಿಡುವ ಸ್ತ್ರೈಣನ ಪರಿ- ।
ಘನ್ನವಯ್ಯ ಘನ್ನವಯ್ಯ ಬನ್ನಬಡುವ ಕುನ್ನಿಮನಕೆ ॥ ೪ ॥

ವಟುವಾಗಿ ಬಲಿಯು ದಾನವನು ಬೇಡಹೋದ ।
ಕಟುಕಷ್ಟಗಳನೆಲ್ಲ ನೀನೆ ಬಲ್ಲೆ ॥
ವಟಪತ್ರಶಾಯಿ ಶ್ರೀಫಣಿವರದ ಪುರಂದರ- ।
ವಿಠಲ ನಿನ್ನ ದಾಸರ ಸಂಗಸುಖವಿರದೆ ॥ ೫ ॥

## ೨೧

ರಾಗ—ನಾದನಾಮಕ್ರಿಯ ತಾಳ—ಆದಿ

೧ ಅನುದಿನದಲಿ ಬಂದು ತನುವ ಸೂರೆಯಗೊಂಡು ।
ಎನಗೊಂದು ಮಾತ ಪೇಳೊ ಜೀವವೆ ! ॥ ಪ ॥
ಘನಕೋಪದಲಿ ಬಂದು ಯಮನವರೆಳೆದೊಯ್ವಾಗ ।
ನಿನಕೂಡಿನ್ನೇತರ ಮಾತೊ ಕಾಯವೆ ! ॥ ಅ ಪ ॥

ಬೆಲ್ಲದ ಹೇರಿನಂತೆ ಬೇಕಾದ ಬಂಧು-ಬಳಗ ।
ನಿಲ್ಲೊ ಮಾತನಾಡತೇನೆ ಜೀವವೆ ॥
ನಿಲ್ಲಗೊಡದೆ ಬಂದು ಯಮನವರೆಳೆದೊಯ್ವಾಗ ।
ಬೆಲ್ಲ ಬೇವಾಯಿತಲ್ಲೋ ಕಾಯವೆ ! ॥ ೧ ॥

ಸಕ್ಕರೆಹೇರಿನಂತೆ ಸವಿದುಂಡು ಪಾಯಸವ ।
ದಿಕ್ಕೆಟ್ಟು ಹೋಗುತೀಯೊ ಜೀವವೆ ॥
ದಕ್ಕಗೊಡದೆ ಬಂದು ಯಮನವರೆಳೆದೊಯ್ವಾಗ ।
ಸಕ್ಕರೆ ವಿಷವಾಯ್ತೋ ಕಾಯವೆ ! ॥ ೨ ॥

---

೧ ಅ (೮) ಬಿಡಿ (೩) ಪ್ರತಿಗಳಿಂದ ಆರಿಸಿದೆ.

ವಿ. ಸೂ.:—ಅ (೮) ಮತ್ತು ಇ ಪ್ರತಿಗಳಲ್ಲಿ ಕೆಳಗಿನ ಎರಡು ಸಾಲು ಹೆಚ್ಚಿಗಿವೆ.

ಮುದ್ದು ಮೋಹವೆಂಬ ಮೋಹಬಲೆಗೆ ಸಿಕ್ಕಿ ।
ಗುದ್ದಾಡಿ ಹೋಗ್ತೀಯಾ ಜೀವವೆ ॥

ಎ ಪ್ರತಿಯಲ್ಲಿ ಕೆಳಗಿನ ಮತ್ತೊಂದು ನುಡಿ ಅಚ್ಚಾಗಿದೆ:

ಮಾಳಿಗೆ ಮನೆಬಿಟ್ಟು ಜಾಳಿಗೆ ರೊಕ್ಕ ಬಿಟ್ಟು ।
ಹೇಳದೆ ಹೋಗ್ತೀಯಾ ಜೀವವೆ ॥
ಕೇಳಗೊಡದೆ ಬಂದು ಯಮನವರೆಳೆದೊಯ್ವಾಗ ।
ಮಾಳಿಗೆಮನೆ ಏಕೆ ಕಾಯುವೆ ॥

ಅಂದಣದೈಶ್ವರ್ಯ ದಂಡಿಗೆ-ಪಲ್ಲಕ್ಕಿ ।
ಮಂದಗಮನೆಯರು ಜೀವವೆ ॥
ಮಂದಗಮನೆ ಯಾರೊ—ಮಡದಿ-ಮಕ್ಕಳು ಯಾರೊ— ।
ಬಂದಂತೆ ಹೋಗ್ತೀನಿ ಕಾಯವೆ ! ॥ ३ ॥

ಸೋರುವ ಮನೆಯಲಿ ಧ್ಯಾನ-ಮೌನಾದಿಗಳು ।
ಬೇರಿತ್ತು ನಿನ್ನ ಮನಸು ಜೀವವೆ ॥
ನೀರಮೇಲಣ ಗುಳ್ಳೆ ತೋರಿ ಹಾರಿದಂತೆ ।
ಯಾರಿಗೆ ಯಾರಿಲ್ಲ ಕಾಯವೆ ! ॥ ೪ ॥

ಹುಟ್ಟಿದ್ದು ಹೊಲೆಯೂರು ಬೆಳೆದದ್ದು ಮೊಲೆಯೂರು ।
ಇಟ್ಟದ್ದು ಈ ಊರು ಜೀವವೆ ॥
ಸೃಷ್ಟಿಗೊಡೆಯ ನಮ್ಮ ಪುರಂದರವಿಠಲನ ।
ಗಟ್ಟಿ ಪೂಜೆಯ ಮಾಡೊ ಕಾಯವೆ! ॥ ೫ ॥



ರಾಗ—ಆನಂದಭೈರವಿ ತಾಳ—ಅಟ

೧ ಸುಮ್ಮನೆ ಬಾಹೊದೆ ಮುಕುತಿ—ನಮ್ಮ- ।
ಚೆನ್ನಾದಿಕೇಶವನ ದಯವಾಗದನಕ ॥ ಪ ॥

ಮನದಲ್ಲಿ ದೃಢವಿರಬೇಕು—ದುರ್- ।
ಜನರ ಸಂಗತಿಯನು ನೀಗಲುಬೇಕು ॥
ಅನುಮಾನಂಗಳ ಬಿಡಬೇಕು—ತನ್ನ- ।
ತನು-ಮನ ಹರಿಗೆ ಒಪ್ಪಿಸಿಕೊಡಬೇಕು ॥ ೧ ॥

ಕಾಮ-ಕ್ರೋಧವ ಬಿಡಬೇಕು—ಹರಿ- ।
ನಾಮಸಂಕೀರ್ತನೆ ಮಾಡಲುಬೇಕು ॥

೧ ಊ (ಖ) ತ ಪ್ರತಿಗಳಿಂದ ತೆಗೆದುಕೊಂಡಿದೆ.

ಹೇಮದಾಸೆಯ ಸುಡಬೇಕು—ತ- ।
ನ್ನಾ ಮನ ಹರಿಯ ಪಾದದಲಿಡಬೇಕು ॥ ೨ ॥

ಪಾಪಗಳನೆ ಕಳೆಯಬೇಕು—ಜ್ಞಾನ- ।
ದೀಪ ಬೆಳಕಿನಲಿ ಲೋಲಾಡಬೇಕು ॥
ತಾಪ ರಹಿತಗೈಯಬೇಕು—ನಮ್ಮ-
ಓಪ ಪುರಂದರವಿಠಲನೊಲಿಯಬೇಕು ॥ ೩ ॥

## ೨೩

ರಾಗ—ಕಾಂಬೋದಿ ತಾಳ—ಅಟ

೧ ಅಂಜಬೇಡ ಬೇಡವೆಲೆ ಜೀವ—ಭವ- ।
ಭಂಜನ ಹರಿ ಶರಣರ ಕಾವ ॥ ಪ ॥

ಬಂದಷ್ಟರಿಂದಲಿ ಬಾಳಿಕೊ—ಬಲು- ।
ಸಂದೇಹಬಂದಲ್ಲಿ ಕೇಳಿಕೊ ॥
ನಿಂದಾ-ಸ್ತುತಿಗಳನು ತಾಳಿಕೊ—ಗೋ- ।
ವಿಂದ ನಿನ್ನವನೆಂದು ಹೇಳಿಕೊ ॥ ೧ ॥

ಮಾಧವನಿಗೆ ತನುಮನ ಮೆಚ್ಚು—ಕಾಮ- ।
ಕ್ರೋಧಾದಿಗಳ ಕಲಿಮಲ ಕೊಚ್ಚು ॥
ವೇದತೀರ್ಥವಚನವೆ ಹೆಚ್ಚು—ಮಾಯಾ- ।
ವಾದಿಮತಕೆ ಬೆಂಕೆಯ ಹಚ್ಚು ॥ ೨ ॥

ಪರವನಿತೆಯರಾಶೆಯ ಬಿಡು—ನೀ- ।
ಹರಿಸರ್ವೋತ್ತಮನೆಂದು ಕೊಂಡಾಡು ॥
ಪರಮಾತ್ಮನ ಧ್ಯಾನವ ಮಾಡು—ನಮ್ಮ- ।
ಸಿರಿಪುರಂದರವಿಠಲನ ನೀ ನೋಡು ॥ ೩ ॥

---

೧ ಪ (ಪಾ ೩) ಹ ೧ (೭) ರಘು (೯) ಪ್ರತಿಗಳಿಂದ ಆರಿಸಿದೆ.

೨೪

ರಾಗ—ಧನ್ಯಾಸಿ ತಾಳ—ಆದಿ

೧ ಹರಿಪದಯುಗಲವ ನಿತ್ಯ ನೆನೆದವಗೆ।
ಪರಮಪದವಿಯೇ ಸಾಕ್ಷಿ॥
ಹರಿ-ಗುರುದೂಷಣ ಮಾಡಿದ ಮನುಜಗೆ।
ನರಕರೌರವವೆ ಸಾಕ್ಷಿ ॥ ಪ ॥

ಕಡುಭಕ್ತಿಯಲಿ ಕೃಷ್ಣನ ನೆನೆದರೆ ।
ನಡೆಯಲಿ ಸತ್ಯವೆ ಸಾಕ್ಷಿ ॥
ದೃಢಭಕುತಿಯಿಂದ ಉಣಬಡಿಸಿದವಗೆ ।
ಷಡುರಸಾನ್ನವೇ ಸಾಕ್ಷಿ ॥ ೧ ॥

ತಾನೊಂದುಂಡು ಪರರಿಗೊಂದಿಕ್ಕುವಗೆ ।
ಗುಲ್ಮರೋಗವೇ ಸಾಕ್ಷಿ ॥
ಹೀನನಾಗಿ ಹಿರಿಯರನು ದೂಷಿಪಗೆ ।
ಹೀನನರಕವೇ ಸಾಕ್ಷಿ ॥ ೨ ॥

ಕನ್ಯಾದಾನವ ಮಾಡಿದವಗೆ ದಿವ್ಯ ।
ಹೆಣ್ಣಿನ ಭೋಗವೆ ಸಾಕ್ಷಿ ॥
ಕನ್ಯಾದಾನವ ಮಾಡದ ಮನುಜಗೆ ।
ಹೆಣ್ಣಿನ ದೈನ್ಯವೇ ಸಾಕ್ಷಿ ॥ ೩ ॥

ಅನ್ನದಾನ ಮಾಡಿದ ಮನುಜಗೆ ದಿ- ।
ವ್ಯಾನ್ನವನುಂಬುದೆ ಸಾಕ್ಷಿ ॥
ಅನ್ನದಾನ ಮಾಡದ ಮನುಜಗೆ ತಿರಿ-
ದುಣ್ಣುತಿರುವುದೇ ಸಾಕ್ಷಿ ॥ ೪ ॥

---

೧ ಊ (ಕ) ಪ್ರತಿಯಿಂದ ತೆಗೆದುಕೊಂಡಿದೆ.

ಕ್ಷೇತ್ರದಾನ ಮಾಡಿದ ಮನುಜಗೆ ಏಕ- ।
ಛತ್ರವನಾಳ್ವುದೆ ಸಾಕ್ಷಿ ॥
ಪಾತ್ರವರಿತು ಧರ್ಮಮಾಡಿದವಗೆ ಸತ್- ।
ಪುತ್ರರಾಗುವುದೆ ಸಾಕ್ಷಿ ॥ ೫ ॥

ಕಂಡ ಪುರುಷಗೆ ಕಣ್ಣಿಡುವ ನಾರಿಗೆ ।
ಗಂಡನ ಕಳೆವುದೆ ಸಾಕ್ಷಿ ॥
ಪುಂಡನಾಗಿ ಪರಸ್ತ್ರೀಯರ ಸೇರುವಗೆ ।
ಹೆಂಡಿರ ಕಳೆವುದೆ ಸಾಕ್ಷಿ ॥ ೬ ॥

ಭಕ್ತಿಯರಿಯದ ಅಧಮನಿಗೊಂದು ।
ಕತ್ತಲೆಮನೆಯೇ ಸಾಕ್ಷಿ ॥
ಮುಕ್ತಿಪಡೆವುದಕೆ ಪುರಂದರವಿಠಲನ ।
ಭಕ್ತನಾಗುವುದೆ ಸಾಕ್ಷಿ ॥ ೭ ॥

## ೨೫

**ರಾಗ—ಪೂರ್ವಿ** **ತಾಳ—ಅಟ**

೧ ಹರಿಕೊಟ್ಟಕಾಲಕ್ಕೆ ಉಣಲಿಲ್ಲ ।
ಹರಿ ಕೊಡದ ಕಾಲಕೆ ಬಾಯಬಿಡುವೆಯೊ ಪ್ರಾಣಿ ॥ಪ॥

---

೧ ಅ (೧) ಇ ಶ ಈ ಪ್ರತಿಗಳಿಂದ ಆರಿಸಿದೆ.

ವಿ. ಸೂ.:— ಶ ಪ್ರತಿಯಲ್ಲಿ 'ಹತ್ತು ಸಾವಿರ ಹೊನ್ನು....' ಎಂಬುದು ಬೇರೆ ಕಡೆಯಿಂದ ಬಂದಿದೆ.

ಇದೇ ಪಲ್ಲವಿ ಇರುವ ಮತ್ತು ನುಡಿಗಳು ಬೇರೆಯಾಗಿರುವ ಹಾಡು ಇ (೧೦) ಪ್ರತಿಯಲ್ಲಿದೆ.

ಹರಿ ಕೊಟ್ಟ ಕಾಲಕೆ ಕೊಡಲಿಲ್ಲ ।
ಹರಿ ಕೊಡದ ಕಾಲಕೆ ಬಾಯಬಿಟ್ಟೆಯೊ ಮೂಢ ॥ ಪ ॥

ಉಡಲಿಲ್ಲ ಉಣಲಿಲ್ಲ ಕೊಡಲಿಲ್ಲ ಧರ್ಮವ ।
ಅಡಗಿಸಿ ಇಟ್ಟೆಹೆ ಮಣ್ಣೊಳಗೆ ॥
ಬಡತನ ಬಂದು ಕಂಬಳಿ ಹೊದೆವಾಗ ।
ತುಡುಗು ನಿನ್ನ ಜನ್ಮ ಸುಡು ಕಾಣೊ ಖೋಡಿ ॥ ೧ ॥

ಹುಗ್ಗಿಯು ತುಪ್ಪವು ಮನೆಯೊಳಗಿರಲಿಕ್ಕೆ ।
ಗುಗ್ಗರಿಯನು ಮಾಡಿ ತಿನ್ನುವಿಯೊ ॥
ವೆಗ್ಗಳವಾದ ಯಮದೂತರು ಎಳೆವಾಗ ।
ಬುಗ್ಗೆಯ ಹೊಯ್ಕೊಂಡು ಹೋದೆಯೊ ಖೋಡಿ ॥ ೨ ॥

ನಂಟರು-ಬಂಧುಗಳೂರೊಳಗಿರಲಿಕ್ಕೆ ।
ಕುಂಟುಸುದ್ದಿಗಳನು ಆಡುವೆ ನೀ ॥
ಕಂಟಕರಾದ ಯಮದೂತರು ಎಳೆವಾಗ ।
ನಂಟ ಪುರಂದರವಿಠಲನ ದ್ರೋಹಿ ॥ ೩ ॥

---

ಧನವ ಸಂಪಾದಿಸಿ ಮನೆಯೊಳಿಟ್ಟುಕೊಂಡು ।
ದಾನಮಾಡೆ ಸತ್ಪಾತ್ರರಲಿ ॥
ಧನ ಪೋಗಲು ನೀನು ಶ್ವಾನನಂದದಲಿ ।
ಮನೆಮನೆಗಳ ಪೊಕ್ಕು ತಿರುಗುವೆ ಮೂಢ ॥ ೧ ॥

ದಶಮಿ-ದ್ವಾದಶಿಯು ಪುಣ್ಯಕಾಲಗಳಲಿ ।
ಹಸನಾಗಿ ಅನ್ನದಾನವ ಮಾಡದೆ ॥
ಹೊಸ ರಾಗಿಮುದ್ದಿಯ ತಿಂದು ಕಾಲವ ಕಳೆದೆ ।
ಅಸು ಪೋಗಲು ಧನ ಬಯಸುವೆ ಮೂಢ ॥ ೨ ॥

ವಶವಾಗಿರಲು ಜಿಹ್ವೆ ಹರಿನಾಮ ನುಡಿಯದೆ ।
ನಿಶಿ-ದಿನದಲಿ ಕಾಲಕಳೆದೆಯೆಲೊ ॥
ವಸುಧೆಯೊಳಗೆ ನಮ್ಮ ಪುರಂದರವಿಠಲನ ।
ಕುಶಲದಿ ಹಾಡದೆ ಕೆಟ್ಟೆಯೊ ಮೂಢ ॥ ೩ ॥

೨೬

ರಾಗ—ಸೌರಾಷ್ಟ್ರ ತಾಳ—ಅಟ

೧ ವಾರಿಜನಾಭನ ಕರುಣವೆ ಸ್ಥಿರ ಸಂ-
ಸಾರವು ಎರವು ಕೇಳಾತ್ಮಾ।
ಜಾರುತಿದೆ ಆಯುಷ್ಯ ದೂರದ ಮುಕುತಿಗೆ
ದಾರಿ ಯಾವುದು ಪೇಳಾತ್ಮಾ ॥ ಪ ॥

ಸತಿ-ಸುತರೆಂಬಾಶೆಯ ಬಿಡು ಮುಂದಿನ।
ಹಿತವರವರುಂಟೇನಾತ್ಮಾ॥
ಮತಿಗೆಟ್ಟು ಕೆಡಬೇಡ ಮರಣ ತಪ್ಪದು ಮುಂದೆ।
ಗತಿಯಾವುದು ಹೇಳಾತ್ಮಾ? ॥ ೧ ॥

ಎರವಿನ ಸಿರಿಗೆ ನೀ ಬಿರಿಬಿರಿದು ಬಿಚ್ಚುವೆ।
ನೀರಕಡೆದರೆ ಬೆಣ್ಣೆಯುಂಟೇನಾತ್ಮಾ॥
ಉರಗನ ಹೆಡೆಯಲಿ ನೆರಳ ಕೋರಿದ ಕಪ್ಪೆ।
ಸ್ಥಿರವೆಂದು ಬಗೆವರೇನಾತ್ಮಾ? ॥ ೨ ॥

ಆನೆ ಕುದುರೆ ಒಂಟೆ ಸೇನೆ ಭಾಂಡಾರವ।
ಏನು ಪಡೆದರೇನಾತ್ಮಾ॥
ನಾನಾಪರಿಯಿಂದ ಕಳೆದು ಉಳಿದು ಮುನ್ನ।
ಹಾನಿ ತಪ್ಪದು ಕೇಳಾತ್ಮಾ ॥ ೩ ॥

ಕೆರೆಯ ಕಟ್ಟಿಸು ಪೂದೋಟವ ಹಾಕಿಸು।
ಸೆರೆಯ ಬಿಡಿಸು ಪುಣ್ಯವಾತ್ಮಾ॥
ಮರೆಯದೆ ಮನೆಗೆ ಬಂದವರಿಗನ್ನವನಿಕ್ಕು।
ಪರಮಪದವಿ ಕಂಡೆಯಾತ್ಮಾ ॥ ೪ ॥

---

೧ ಅ (ಬಿಡಿ ೫) ಪ್ರತಿಯಲ್ಲಿಯೇ ಸಿಕ್ಕುತ್ತದೆ.

ವಿ. ಸೂ.:— ಈ ಹಾಡು ಮ ಪ್ರತಿಯಲ್ಲಿ 'ಎರವಿನ ಸಿರಿಗೆ ಬಿಮ್ಮನೆ ಬೆರೆತರೆ' ಎಂಬ ಪಲ್ಲವಿಯಿಂದ ಆರಂಭಿಸುತ್ತದೆ.

ಲೆತ್ತ-ಪಗಡೆ-ಚದುರಂಗ ಜೂಜಾಟವ ।
ಮತ್ತಾಡಿ ಕೆಡಬೇಡವಾತ್ಮಾ ॥
ಭಕ್ತಿಯಲಿ ಪುರಂದರವಿಠಲನ ನೆನೆದರೆ ।
ಮುಕ್ತಿಸಾಧನ ಕಂಡೆಯಾತ್ಮಾ ॥ ೫ ॥

೨೭

ರಾಗ—ರೇಗುಪ್ತಿ ತಾಳ—ಝಂಪೆ

೧ ವಿಷಯದ ವಿಚಾರ ಬಿಡು ವಿಹಿತಕರ್ಮವ ಮಾಡು ।
ವೈರಾಗ್ಯಭಾಗ್ಯ ಬೇಡು ॥ ಪ ॥

ವಿಷವೆಂದು ಕಾಮ-ಕ್ರೋಧಗಳೆಲ್ಲವೀಡಾಡು ।
೨ ಮುಸಣಮನವೇ ಮಾಧವನನು ಕೊಂಡಾಡು ॥ ॥ ಅ ಪ ॥

ಅನುದಿನದಿ ಹರಿಕಥೆಯ ಕೇಳಿ ಸಂತೋಷಪಡು ।
ದಿನದಿನವು ಸಜ್ಜನರ ಕೂಡು ॥
ಮನಮುಟ್ಟಿ ದುರಾಚಾರ ಮಾಳ್ಪರನು ನೀ ಕಾಡು ।
ಹಣ-ಹೊನ್ನು ಪರಹೆಣ್ಣು ಹೆಂಟೆಯಂತೆ ನೋಡು ॥ ೧ ॥

ವೇದಶಾಸ್ತ್ರಾರ್ಥತತ್ತ್ವದ ವಿಚಾರವ ಮಾಡು ।
ಮಾಧವನ ಭಕ್ತಿ ಬೇಡು ॥
ಪಾದದಲಿ ಪುಣ್ಯತೀರ್ಥದ ಯಾತ್ರೆಮಾಡು ಮಧು- ।
೩ ಸೂದನನ ಕೀರ್ತಿ ಸಂಕೀರ್ತನೆಯ ಮಾಡು ॥ ೨ ॥

---

೧ ಅ (ಬಿಡಿ ೬) ಅ (VI) ಇ ಕ ಶ್ರೀ ಪ್ರತಿಗಳಿಂದ ಆರಿಸಿದೆ.

೨ ಮಥನ (ಅ ಬಿಡಿ ೬).

೩ ಶೋಧಿಸುತ ಹರಿಕಥಾಮೃತ ಸವಿದು ಬಾಳು (ಅ ಬಿಡಿ ೬).

ಅಂಬುಗುಳ್ಳೆಗಳಂತೆ ಎಂದಿಗಿದ್ದರು ದೇಹ ।
ನಂಬಿ ನೀ ಕೆಡಲುಬೇಡ ॥
ಕೊಂಬವರು ಬಂದರಾಕ್ಷಣಕೆ ಬೆಲೆಯಾಗುವುದು ।
ಅಂಬುಜಾಕ್ಷ ಪುರಂದರವಿಠಲನ ನೆನೆ ಮನವೆ ॥ ೩ ॥

೨೮

ರಾಗ—ರೇಗುಪ್ತಿ ತಾಳ—ಆದಿ

೧ ಬುತ್ತಿಯ ಕಟ್ಟೊ—ಮನುಜಾ ।
ಬುತ್ತಿಯಕಟ್ಟೊ ॥ ಪ ॥

ಬುತ್ತಿಯನ್ನು ಕಟ್ಟಿದರೆ ।
ಎತ್ತಲಾದರುಣ್ಣಬಹುದು ॥ ಅ ಪ ॥

ಧರ್ಮವೆಂಬ ಮಡಕೆಯಲ್ಲಿ ।
ನಿರ್ಮಲಗಂಗೆಯನು ತುಂಬಿ ॥
ಸುಮ್ಮಾನದಿಂದಲಿ ಬೇಗ ।
ಒಮ್ಮನಕ್ಕಿಯ ಅನ್ನಬಾಗಿ ॥ ೧ ॥

ಅರಿವು ಎಂಬ ಅರಿವೆಯ ಹಾಸಿ ।
ಗರಿಮೆ ಹಾಲ-ಮೊಸರ ತಳಿದು ॥
ಪರಮವೈರಾಗ್ಯದಿಂದ ।
ಸಿರಿಹರಿಗರ್ಪಿತವೆಂದು ॥ ೨ ॥

ಕರ್ತೃ ಪುರಂದರವಿಠಲನ ।
ತತ್ತ್ವವೆಂಬ ಬುತ್ತಿಯನ್ನು ॥
ಹತ್ತಿರ ತಂದಿಟ್ಟುಕೊಂಡು ।
ನಿತ್ಯವುಂಡು ತೃಪ್ತಿಪಡೆಯೊ ॥ ೩ ॥

೧ ಈ (೧) ನೇ ಮಾ ಪ್ರ ಪ್ರತಿಗಳಿಂದ ಆರಿಸಿಕೊಂಡಿದೆ.

೨೯

ಉಗಾಭೋಗ

೧ ಧ್ವಜವಜ್ರಾಂಕುಶರೇಖಾಂಕಿತ ಹರಿಪಾದಾಂ- ।
ಬುಜವ ಸೇವಿಸುವ ಅಜ-ಭವರ ಭಾಗ್ಯವ ನೋಡೊ ।
ತ್ರಿಜಗವಂದ್ಯನ ಪಾಡೊ ದುರ್ಜನರ ಸಂಗವ ಬಿಡೊ ।
ಕುಜನಮತವನು ಸುಡೊ ।
ಗಜೇಂದ್ರನ ಕಾಯ್ದ ಸಿರಿಕೃಷ್ಣನ ಧ್ಯಾನವ ಮಾಡೊ ।
ಪುರಂದರವಿಠಲನ ಬಿಡದೆ ಕೊಂಡಾಡೊ ! ‖ ೧ ‖

೩೦

ಉಗಾಭೋಗ

೨ ನೀರಮೇಲಣ ಗುಳ್ಳೆಯಂತೆ ಈ ದೇಹ ।
ನಿಮಿಷವೊ ನಿಮಿಷಾರ್ಧವೊ ಕಾಣಬಾರದು ।
ಹಾರಲೇಕೆ ಪರಧನಕೆ ಪರಸತಿಗೆ ? ।
ಹಾರುವನ ಕಟ್ಟಬೇಕು ಹಾರುವರನು ಕುಟ್ಟಬೇಕು ।
ಹಾರುವರನ ಕಂಡರೆ ಕೆನ್ನೆಯ ಮೇಲೆ ಹಾಕಬೇಕು ।
ಹಾರಲೇಕೆ ಪರಧನಕೆ ಪರಸತಿಗೆ ।
ಊರೊಳಗೆ ಐದುಮಂದಿ ಹಾರುವರೈದಾರೆ ।
ನೀನೆ ವಿಚಾರಿಸೊ ಪುರಂದರವಿಠಲ ‖ ೧ ‖

---

೧ ಅ (೧೧) ಪ್ರತಿಯಿಂದ ಆರಿಸಿಕೊಂಡಿದೆ.

೨ ಅ (೧೧) ಪ್ರತಿಯೊಂದರಲ್ಲಿಯೇ ಸಿಕ್ಕುತ್ತಿದೆ.

ವಿ. ಸೂ.:— ಮೇಲಿನ ಮೂರು ಸಾಲುಗಳನ್ನು ಬಿಟ್ಟು ಇದರ ಉಳಿದ ಭಾಗವಷ್ಟೇ ಪ್ರಚಾರದಲ್ಲಿದೆ.

## ೩೧

ರಾಗ—ಕಾಂಬೋದಿ (ಶಂಕರಾಭರಣ) ತಾಳ—ಝಂಪೆ

[1] ಧರ್ಮವೇ ಜಯವೆಂಬ ದಿವ್ಯಮಂತ್ರ ।
ಮರ್ಮಗಳನೆತ್ತಿದರೆ ಒಳಿತಲಾ ಕೇಳಿ ॥ ಪ ॥

ವಿಷವನುಣಿಸಿದಗೆ ಷಡುರಸವನುಣಿಸಲುಬೇಕು ।
ದ್ವೇಷವಮಾಡುವನ ಪೋಷಿಸಲುಬೇಕು ॥
ಹುಸಿದು ಮನೆ ಕೊಂಬವನ ಹಾಡಿಹರಸಲುಬೇಕು ।
ಅಸು ಹೀರಿದನ ಹೆಸರ ಮಗನಿಗಿಡಬೇಕು ॥ ೧ ॥

ಹಿಂದೆ ನಿಂದಿಸುವರನು ವಂದಿಸುತಲಿರಬೇಕು ।
ಬಂಧಿಸಿದವನ ಕೂಡ ಬೆರೆಯಬೇಕು ॥
ನಿಂದ ನಿಲುವಿಗೆ ಸೇರದವನ ಪೊಗಳಲುಬೇಕು ।
ಕೊಂದವನ ಗೆಳೆತನವ ಮಾಡಬೇಕಯ್ಯ ॥ ೨ ॥

ಕೊಂಡೊಯ್ದು ಕೆಡಿಸುವನ ಕೊಂಡಾಡುತಿರಬೇಕು ।
ಕಂಡರಾಗದವರ ತಾ ಕರೆಯಬೇಕು ॥
ಪುಂಡರೀಕಾಕ್ಷ ಶ್ರೀಪುರಂದರವಿಠಲನ ಅ- ।
ಖಂಡ ಮಹಿಮೆಯನರಿತು ನೆನೆಯಬೇಕಯ್ಯ ॥ ೩ ॥

## ೩೨

ರಾಗ—ಪಂತುವರಾಳಿ ತಾಳ—ಏಕ

[2] ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ ।
ಹೆಮ್ಮೆಯಿಂದ ಈ ಶರೀರ ನಂಬಬೇಡಿ ಕಾಣಿರೊ ॥ಪ॥

---

[1] ಅ (೧) ಆ (II) ಪು (೭) ಶ್ರೀ ಪ್ರತಿಗಳಿಂದ ಆರಿಸಿ ಬರೆದಿದೆ.
[2] ಕ. ವಿ. ವಿ. ತಾಳೆಗರಿ (೮೫೨- ೭೫೦) ಪ್ರತಿಯಿಂದ ತೆಗೆದುಕೊಂಡಿದೆ.
[3] ಪ್ರತಿಯಲ್ಲಿ ಎರಡು ಹೆಚ್ಚಿನ ನುಡಿಗಳಿವೆ, ವಿಕಾರಗಳೂ ತುಂಬಿವೆ.

ಅಟ್ಟ ಅಡಿಗೆ ಉಣಲು ಕೊಡನು ಕೊಟ್ಟ ಸಾಲ ಕೇಳಗೊಡನು ।
ಪೆಟ್ಟಿಗೆತುಂಬ ಹಣವು ಇದ್ದರೆ ಕೊಟ್ಟೆನೆಂದರೆ ಬಿಡನು ಯಮನು ॥ ೧ ॥

ಮಾಳಿಗೆಯ ಮನೆಯು ಇರಲು ಜಾಳಿಗೆತುಂಬ ಹೊನ್ನು ಇರಲು ।
ಆಳುಮಂದಿ ಕುದುರೆ ಇದ್ದರೆ ಬೀಳುಗೊಡದೆ ಯಮನು ಬಿಡನು ॥ ೨ ॥

ವ್ಯರ್ಥವಾದ ಈ ಶರೀರ ಸತ್ಯವೆಂದು ನಂಬಬೇಡಿ ।
ಕರ್ತುಪುರಂದರವಿಠಲರಾಯನ ಭಕ್ತಿಯಿಂದ ನೆನೆಯಿರೊ ॥ ೩ ॥

೩೩

ರಾಗ—ರೇಗುಪ್ತಿ ತಾಳ—ಅಟ

೧ ಜ್ಞಾನವೊಂದೇ ಸಾಕು ಮುಕ್ತಿಗೆ—ಇ- ।
ನ್ನೇನು ಬೇಕು ಹುಚ್ಚುಮರುಳು ಮಾನವನೆ ॥ ಪ ॥

ಪಿತ ಮಾತೆ ಸತಿ ಸುತರನಗಲಿರಬೇಡ ।
ಯತಿಯಾಗಿ ಅರಣ್ಯ ಚರಿಸಲುಬೇಡ ॥
ವ್ರತ-ನೇಮವ ಮಾಡಿ ದಣಿಯಲುಬೇಡ ।
ಸತಿಯಿಲ್ಲದವಗೆ ಸದ್ಗತಿಯಿಲ್ಲೋ ಮೂಢ ॥ ೧ ॥

ಜಪ-ತಪವನೆ ಮಾಡಿ ಸೊರಗಲುಬೇಡ ।
ಕಪಿಯಂತೆ ಅಡಿಗಡಿಗೆ ಹಾರಲುಬೇಡ ॥
[ಉಪವಾಸಪಾಶಕ್ಕೆ] ಸಿಕ್ಕಲುಬೇಡ ।
ಚಪಲತನದಲೇನು ಫಲವಿಲ್ಲೋ ಮೂಢ ॥ ೨ ॥

ಜಾಗರದಲಿ ನಿದ್ರೆ ಕೆಡಿಸಲುಬೇಡ ।
ಓಗರವನು ಬಿಟ್ಟು ಒಣಗಲುಬೇಡ ॥

---

೧ ಅ (VI) ಝು (೯) ಪ್ರತಿಗಳಿಂದ ಆರಿಸಿ ಬರೆದಿದೆ.

ಸೋಗುಮಾಡಿ ಹೊತ್ತು ಕಳೆಯಲುಬೇಡ ।
ಗೂಗೆ ಹಾಗೆ ಕಣ್ಣು ತಿರುಗಿಸಬೇಡ ॥ ೩ ॥

ಹೊನ್ನು-ಹೆಣ್ಣು-ಮಣ್ಣು ಜರೆದಿರಬೇಡ ।
ಅನ್ನ-ವಸ್ತ್ರಗಳನ್ನು ತೊರೆದಿರಬೇಡ ॥
ಬಣ್ಣದ ದೇಹವ ನೆಚ್ಚಲುಬೇಡ ।
ತಣ್ಣೀರೊಳಗೆ ಮುಳುಗಿ ನಡುಗಲುಬೇಡ ॥ ೪ ॥

ಮಹಾವಿಷ್ಣುಮೂರ್ತಿಯ ಮರೆತಿರಬೇಡ ।
ಸಾಹಸದಿಂದಲಿ ಶ್ರಮಪಡಬೇಡ ॥
ಕುಹಕಬುದ್ಧಿಯಲಿ ಕುಣಿದಾಡಬೇಡ ।
ಮಹಿಮ ಪುರಂದರವಿಠಲನ ಮರೆಯದಿರೊ ಮೂಢ ॥ ೫ ॥

## ೩ ಸದಾಚಾರನೀತಿ

### ೩೪

ಉಗಾಭೋಗ

[೧] ಕಲಿಕಾಲಕೆ ಸಮಯುಗವು ಇಲ್ಲವಿಲ್ಲವಯ್ಯ ।
ಕಲುಷಹರ ಕೈವಲ್ಯವು ಕರಸ್ಥವಯ್ಯ ।
ಜಲಜಲೋಚನ ನಮ್ಮ ಪುರಂದರವಿಠಲನ್ನ ।
ಒಲಿಸಿಕೊಂಡು ಸುಖಿಸಿ ಬಾಳುವುದಕೆ ॥

೧. ಖ ೧ (೪) ಪ್ರತಿಯಿಂದ ಆರಿಸಿದೆ.

೩೫

೧ ಹರೇ ಗೋವಿಂದಾ ಎಂದೇಳು ಹತ್ತವತಾರವ ಪೇಳು ।
ಮೂಡಲದೆಸೆಗೆ ನಡೆ ।
ಗೋ-ವಿಪ್ರ-ತುಳಸಿಗೆ ಎರಗಿ ಬಂದು ।
ನೈಋತ್ಯದಲ್ಲಿ ತೃಣವನಿಟ್ಟು ।
ಮಲ-ಮೂತ್ರಂಗಳ ಬಿಟ್ಟು ।
ಗುರುಪರಂಪರೆಯೆಂದು ಪುರಂದರವಿಠಲನೆನ್ನು ॥ ೧ ॥

೩೬

೨ ಹತ್ತೈದು ಗಳಿಗೆಯ ಮೇಲೆ ಮತ್ತೈದು ಬರಲಿದ್ದು ।
ಚಿತ್ತಜನೈಯ್ಯನ ಚಿತ್ತದಿ ಧೇನಿಸಿ ।
ಆತ್ತಲುದಯಕ್ಕೆ ಗಳಿಗೆ ಎರಡರಲ್ಲಿ ಎದ್ದು ।
ನಿತ್ಯ ಸ್ನಾನವ ಮಾಡಿ ಆದಿತ್ಯಗರ್ಘ್ಯವನೀಯೆ ।
ಉತ್ತಮ ಜನಕೆಲ್ಲ ಮೆತ್ತಿದ ಪಾಪಗಳನ್ನು ।
ಉತ್ತರಿಸುವೆನೆಂದ ಪುರಂದರವಿಠಲ ॥

೩೭

೩ ಪ್ರಾತಃಕಾಲದ ನಿದ್ರೆ ಪರಿಹರಿಸಿ ಹರಿಯ ಸ್ಮರಿಸಿ ।
ನಾಥಗೋವಿಂದನಿಗೆ ಪ್ರದಕ್ಷಿಣೆ ।
ಪ್ರೀತಿಯೊಳತಿಥಿಯ ಪೂಜಿಸಿ ಪುರಾಣ-ಶಾಸ್ತ್ರವ ಕೇಳಿ ।
ನಾಥ ಶ್ರೀಪುರಂದರವಿಟ್ಠಲನೆ ನಮೋ ಎನ್ನಿ ॥ ೧ ॥

---

೧ ಗ (x) ಪ್ರತಿಯಿಂದ ತೆಗೆದುಕೊಂಡಿದೆ.
೨ ಗ (x) ಪ್ರತಿಯಿಂದ ತೆಗೆದುಕೊಂಡಿದೆ.
೩ ಗ (x) ಪ್ರತಿಯಿಂದ ತೆಗೆದುಕೊಂಡಿದೆ.

೩೮

೧ ಮಲ-ಮೂತ್ರ ಮಾಡುವಾಗ ಕರದಲ್ಲಿ ಜಲವಿರೆ।
ಮಲಕೆ ಸಮಾನ ಅದು ಶುದ್ಧವಲ್ಲ।
ವಿಲಸಿತ ಕರ್ಮವಾಚರಿಸಿ ಹರಿಯ ನೆನೆಯೆ।
ಒಲಿವ ಪುರಂದರವಿಠಲ ॥

೩೯

೨ ನುಡಿವೆ ಲಿಂಗಶೌಚಕ್ಕೊಮ್ಮೆ ಗುದಕ್ಕೆ ಮೂರು।
ನೆಲ್ಲಿಕಾಯಿಯಷ್ಟು ಮಣ್ಣ ಹಚ್ಚಿ।
ನೀರೊಳು ತೊಳೆದು ಬಲದ ಕೈಗೆ ಐದು ಮಣ್ಣು।
ಎಡದ ಕೈಗೆ ಏಳು ಮಣ್ಣು।
ಜೋಡುಪಾದಕ್ಕೆ ಐದೈದು ಮಣ್ಣು।
ಐದು ಕಡೆಯಲಿಟ್ಟು ಪುರಂದರವಿಠಲ ಎನ್ನು ॥೧॥

೪೦

೩ ಹಲ್ಲು ಬೆಳಗುವಲ್ಲಿ ಜಂಬು-ಪ್ಲಕ್ಷಪತ್ರೆ।
ನೆಲ್ಲನಿಲ್ಲು (?) ಮಹಾಲಯ ಪುಣ್ಯದಿವಸದಿ।
ಬಲ್ಲಿದ ಏಕಾದಶಿ ಪರ್ವಣಿ ಅಮಾವಾಸ್ಯೆಯಲಿ।
ರವಿ-ಶಶಿಗ್ರಹಣದಲಿ।
ಸಲ್ಲದಯ್ಯ ದಂತಕಾಷ್ಠ ಮಲಿನಗಳಿಗೆ।
ಗಲ್ಲಿಸಿ ನೀರಮುಕ್ಕಳಿಸೆ ಹನ್ನೆರಡು।
ಬಲ್ಲ ಬುಧರಿಗೆ ಪುರಂದರವಿಠ ಒಲಿವ।
ಇದನಾಚರಿಸೆ ॥

೧ ಘ ೩ ಧ ಪ್ರತಿಗಳಿಂದ ಆರಿಸಿದೆ.

೨ ಗ (x) ಪ್ರತಿಯಿಂದ ತೆಗೆದುಕೊಂಡಿದೆ.

೩ ಓ ಪ್ರತಿಯಿಂದ ತೆಗೆದುಕೊಂಡಿದೆ.

೪೧

೧ ಎರಡುಗಳಿಗೆ ಬೆಳಗು ಇರಲು ಗೃಹಸ್ಥಗೆ ಸ್ನಾನ ।
ಕರವ ಮುಗಿದು ಮಾಡು ಸಂಕಲ್ಪವೇದ ।
ಪರಮಪುಣ್ಯ ಬ್ರಾಹ್ಮಣಧರ್ಮವೆಂದು ।
ಪುರಂದರವಿಠಲನು ಮೆಚ್ಚಿ ಪಾಲಿಸುವ ॥

೪೨

೨ ಕೂಪದಲ್ಲಿಯಾದರೂ ಕೊಳದಲ್ಲಿಯಾದರೂ ।
ವಾಪಿಯಲ್ಲಿಯಾದರೂ ।
ಆ ಪತ್ನಿಯನೆರೆದಿದ್ದರೂ ಗೋಪೀಚಂದನದ ।
ಸಂಪರ್ಕವಿದ್ದರೆ ಅದೆ ಸಂಧ್ಯಾಕಾಲವೆಂದು ।
ಪುರಂದರವಿಠಲ ಪೇಳ್ದ ॥ ೧ ॥

೪೩

೩ ಹೃದಯದ ಮಲವನ್ನು ತೊಳೆಯಲರಿಯದೆ ತಾವು ।
ಉದಯದಲೆದ್ದು ಮಿಂದು ಗದಗದ ನಡಗುವರು ।
ಅದರಿಂದೇನು ಫಲ ? ಅದಕಿಂತ ।
ಉದಯಾಸ್ತಮಾನ ನೀರೊಳಗಿದ್ದ ಮುದಿಕಪ್ಪೆ ಮಾಡಿದ
ತಪ್ಪೇನಯ್ಯ ? ।
ಪುರಂದರವಿಠಲನ ನಾಮವ ನೆನೆಯದೆ ।
ದಿನಕೆ ಇನ್ನೂರುಬಾರಿ ಮುಳುಗಿದರೇನಯ್ಯ ಫಲವು ? ॥ ೧ ॥

---

೧ ಓ ಥ ಪ್ರತಿಗಳಿಂದ ತೆಗೆದುಕೊಂಡಿದೆ.
೨ ಗ (x) ಪ್ರತಿಯಿಂದ ತೆಗೆದುಕೊಂಡಿದೆ.
೩ ಝ (ಲ) ಪ್ರತಿಯಿಂದ ತೆಗೆದುಕೊಂಡಿದೆ.

### ೪೪

೧ ನೀಲವಸ್ತ್ರವಾಗದು ನಾರಿಯರ ಶಾಲೆಯಾಗದು ।
ಕಾಲ ಮೂರು ಕರ್ಮದಲ್ಲಿ ಕಾಲವಸ್ತ್ರವಾಗದು ।
ಆರ್ದ್ರವಸ್ತ್ರವಾಗದು ಆಜ್ಞೆ ಶ್ರೀಪುರಂದರವಿಟ್ಠಲನ ॥

### ೪೫

೨ ಅಂದವಿಲ್ಲದ ಅಶಕ್ತನಿಗೆ ಒಂದೇ ಅರಿವೆಯಿಂದ ।
ಮೈದೊಳೆದು ಮಡಿಯುಟ್ಟು ನಾಮಗಳಿಟ್ಟು ।
ಚೆಂದದಲಿ ಸಂಧ್ಯಾವಂದನೆ ಮಾಡೆ ಫಲವಹುದು ।
ನಿಂದೆ ಹಿಂಗಲೆಂದು ಮಾಡಿದ ಮನುಜಂಗೆ ।
ಇಂದ್ರ ಹದಿನಾಲ್ಕು ಮನುನರಕವೆಂದು ।
ಅಂದು ಪುರಂದರವಿಠಲ ಪೇಳಿದನೆಂದು ಸಿದ್ಧ ॥ ೧ ॥

### ೪೬

೩ ನಕ್ಷತ್ರಗಳ ಕಂಡ ನರನಿಗೆ ಉತ್ತಮಸಂಧ್ಯೆ ।
ನಕ್ಷತ್ರ ಒಂದೆರಡು ಕಂಡ ನರನಿಗೆ ಮಧ್ಯಮಸಂಧ್ಯೆ ।
ನಕ್ಷತ್ರ ಒಂದನೂ ಕಾಣದ ನರನಿಗೆ ಅಧಮಸಂಧ್ಯೆ ।
ನಕ್ಷತ್ರ ಬಿಟ್ಟ ನರನನು ನಾರಾಯಣ- ।
ಪುರಂದರವಿಠಲ ಬಿಡುವ ॥ ೧ ॥

---

೧ ಗ (x) ಪ್ರತಿಯಿಂದ ಅರಿಸಿಕೊಂಡಿದೆ.
೨ ಎ ಧ ಪ್ರತಿಗಳಿಂದ ತೆಗೆದುಕೊಂಡಿದೆ.
೩ ಗ (x) ಪ್ರತಿಯಿಂದ ತೆಗೆದುಕೊಂಡಿದೆ.

## ೪೭

೧ ಕಂಡ ಸೂರ್ಯಗೆ ಸಂಧ್ಯೆ ಕಾಣದ ಸೂರ್ಯಗೆ ಸಂಧ್ಯೆ ಭೂ- ।
ಮಂಡಲದಿ ಮಾಡದಿರಲು ಮಾ- ।
ರ್ತಾಂಡ ನೂರು ಹತ್ಯಾ ಮಾಡಿದ ಪಾಪ—ಶ್ರುತಿ ಸಾರುತಿದೆ ।
ಪುಂಡಗಾರ ನರಗೆ ।
ನರಕ ತಪ್ಪದು ಎಂದು ।
ಅಂಡಜಪತಿ ಪುರಂದರವಿಠಲ ಪೇಳ್ದ ॥ ೧ ॥

## ೪೮

೨ ಆಕಳ ಕಿವಿಗೆ ಎಣೆ ಅಂಗೈ ಹಳ್ಳವಾಗಿರಬೇಕು ।
ಉದ್ದು ಮುಣುಗುವಂತೆ ಇರಬೇಕು ।
ನೀರು ಸಾಕಾಗದೆ ಹೆಚ್ಚುಕಡಮೆ ಸಾಕೆಂಬಷ್ಟು ಕುಡಿದರೆ ।
ಸಾಕಾರ ಪುರಂದರವಿಠಲ ಮದ್ಯಸಮ ಮಾಡುವ ॥ ೧ ॥

## ೪೯

೩ ಹಲವು ಕರ್ಮಗಳಿಗೆ ಹವಣು ಎರಡಾಚಮನ ।
ಮಲ-ಮೂತ್ರ ವಿಸರ್ಜನಕ್ಕೆ ಮಾಡು ಮೂರು ।
ನಲಿದು ಉಂಡಮೇಲೆ ನಾಲ್ಕು ।
ಲಲನೆಯ ಸಂಗಕ್ಕೆ ಹನ್ನೆರಡು ।
ಆಸ್ಲಿಂಡೊಲಿವನು ಪುರಂದರಪಿಠಲ ಆಚಮನವನು ಮಾಡೆ ॥

---

೧ ಗ (x) ಪ್ರತಿಯಿಂದ ತೆಗೆದುಕೊಂಡಿದೆ.
೨ ಗ (x) ಪ್ರತಿಯಿಂದ ತೆಗೆದುಕೊಂಡಿದೆ.
೩ ಥ ಪ್ರತಿಯಿಂದ ತೆಗೆದುಕೊಂಡಿದೆ.

### ೫೦

೧ ಆಪೋಶನ ಅಭ್ಯಂಜನ ಆಚಮನ ಮಾಡಲು ।
ತನ್ನೆಡಗೈಯಿಂದ ತಾನೆ ವರ್ತಿಸಲು ।
ಆ ಪುರುಷಂಗೆ ಆದ ಪುತ್ರರು ಮಡಿವರು ।
ಆಪತ್ತು ತಂದುಬಿಡುವ ಪುರಂದರವಿಠಲ ॥ ೧ ॥

### ೫೧

೨ ರಮ್ಮೆ ರಮಣ ತಾನು ಬೊಮ್ಮಾದಿಗಳಿಗೆಲ್ಲ ।
ಸುಮ್ಮನಸದೊಳು ಸೂರ್ಯಗರ್ಘ್ಯವನಿತ್ತು ।
ನಿಮ್ಮ ಪಾಪಗಳೆಲ್ಲ ಚಿಮ್ಮಿ ಕಳೆಯಿರೆಂದು ।
ಬೊಮ್ಮಮೂರುತಿ ತಾನು ಗಮ್ಮನೆ ಪೇಳಲು ।
ಸುಮ್ಮನೆ ಕೆಡದಿರಿ ನಿಮ್ಮ ಅಜ್ಞಾನಕೆ ಸಿಲುಕಿ ।
ನಿಮ್ಮನು ಶಿಕ್ಷಿಸುವ ಪುರಂದರವಿಠಲ ॥ ೧ ॥

### ೫೨

೩ ಬಿಡು ಮನುಜಾ ಈ ಜಪವು ಸಿದ್ಧಿಗೆ ಬಾರದು ।
ತೊಡೆಯ ಕೆಳಗೆ ಕೈ ಹಿಂದೆ ಮುಂದೆ ಕೈಚಾಚಿ ।
ಬಿಡುತ ಮಂತ್ರಾರ್ಥ ನೋಡದಲೆ ।
ಅಡಿಗಡಿಗೆ ಜಪವ ಮಾಡೆ ।
ದೈತ್ಯರಿಗೆ ಆಹುದಯ್ಯಾ ।
ಒಡೆಯ ಪುರಂದರವಿಠಲನನೊಲಿಸಬೇಕಾದರೆ ।
ಬಿಡಬೇಡ ಈ ಪರಿ ಹೇಳಿದ ವಚನತತ್ತ್ವಗಳ ॥

೧ ಗ (x) ಪ್ರತಿಯಿಂದ ತೆಗೆದುಕೊಂಡಿದೆ.
೨ ಗ (x) ಪ್ರತಿಯಿಂದ ತೆಗೆದುಕೊಂಡಿದೆ.
೩ ಎ ಘ ಢ ಪ್ರತಿಗಳಿಂದ ತೆಗೆದುಕೊಂಡಿದೆ.

೫೩

೧ ಅನಾಮಿಕಾ ಮಧ್ಯದ ಎರಡನೆಯ ಗೆರೆ ಆದಿ ।
ಇನಿತು ಮಧ್ಯಾಂಗುಲಿ ಕೊನೆಗೆರೆ ಕೂಡಿಸಿ ।
ಮನುಮೂರ್ತಿ ಪರಿಮಾಣ ಅಂಗುಷ್ಠದಿಂದಲಿ ।
ಎಣಿಸು ತರ್ಜನಿ ಮೂಲ ಪರಿಯಂತರ ।
ಘನ ಹತ್ತು ಗೆರೆ ಜಪ ಪುರಂದರವಿಠಲಗೆ ।
ಮನದಿ ಅರ್ಪಿಸುತ ಗಾಯತ್ರಿಜಪವ ॥

೫೪

೨ ಮಧ್ಯಾಂಗುಲಿಯ ಮೇಲೆ ಮಣಿಸರವಿಟ್ಟು ।
ಬದ್ಧ ಅಂಗುಟವೆಣಿಸಬೇಕು ।
ತಿದ್ದಿ ಅಂಗುಲಿ ಪಂಚ ಬೊಗ್ಗಿಸಿ ಇರಬೇಕು ।
ಭದ್ರವಾಗಿ ನಿಲಿಸಿ ನೀರು ಸೋರದೆ ಗಾಯತ್ರಿಯ ।
ಬುದ್ಧಿಪೂರ್ವಕದಿಂದ ಗೆಯ್ಯುತಲಿರಬೇಕು ।
ಮುದ್ದು ಮೂರುತಿ ನಮ್ಮ ಪುರಂದರವಿಠಲನ್ನ ।
ಎದ್ದೆದ್ದು ನೋಡುವ ಬಗೆ ಕಾಣಲುಬೇಕು ॥

೫೫

೩ ಅಪರಾಧ ಹತ್ತಕೆ ಅಭಿಷೇಕ ಉದಕ ।
ಅಪರಾಧ ನೂರಕೆ ಕ್ಷೀರ ಹರಿಗೆ ।

೧ ಓ ಥ ಪ್ರತಿಗಳಿಂದ ಆರಿಸಿದೆ.
೨ ಓ ಥ ಪ್ರತಿಗಳಿಂದ ಆರಿಸಿಕೊಂಡಿದೆ.
೩ ಓ ಥ ಪ್ರತಿಗಳಿಂದ ಆರಿಸಿದೆ.

ಅಪರಾಧ ಸಹಸ್ರಕೆ ಹಾಲು-ಮೊಸರು ಕಾಣೊ ।
ಅಪರಾಧ ಲಕ್ಷಕೆ ಜೇನು-ಘೃತ ।
ಅಪರಾಧ ಹತ್ತುಲಕ್ಷಕೆ ಬಲುಪರಿ ಕ್ಷೀರ ।
ಅಪರಾಧ ಹೆಚ್ಚಿಗೆಗೆ ಹತ್ತು ತೆಂಗಿನಹಾಲು ।
ಅಪರಾಧ ಕೋಟಿಗೆ ಅಚ್ಚ ಜಲ ।
ಅಪರಾಧ ಅನಂತಕ್ಷಮೆಗೆ ಗಂಧೋದಕ ।
ಉಪಮೆರಹಿತ ನಮ್ಮ ಪುರಂದರವಿಠಲಗೆ ।
ತಾಪಸೋತ್ತಮನ ಒಲುಮೆವಾಕ್ಯ ॥

೫೬

೧ ಒಂದಕ್ಷರವ ಪೇಳಿದವರ ।
ಉರ್ವಿಯೊಳಗೆ ಬಹುಮಾನ ಮಾಡಬೇಕು ।
ಒಂದು ಬಾರಿಯಾದರೂ ಒಂದಿಷ್ಟು ಅವಮಾನ ಮಾಡಿದರೆ ।
ಕುಂದದೆ ನೂರು ಶ್ವಾನಜನ್ಮ ಕೋಟಿ ಹೊಲೆಜನ್ಮ ।
ಪುರಂದರವಿಠಲನ ಆಜ್ಞೆಯಿದು ॥ ೧ ॥

೫೭

೨ ಸಹಸ್ರಕಾಷ್ಠದ ಭಾರ ಸದ್ಯೋಘೃತ ಕುಂಭ ನೂರು ।
ಮಹಾಮಂತ್ರದಿಂದ ಹೋಮ ಮಾಡದಿದ್ದರೆ ನಿರರ್ಥಕ ।
ವಾಸುದೇವಗರ್ಪಿತ ಅನ್ನವ ಅತಿಥಿಗೀಯದಿದ್ದರೆ ।
ವೈರದಿ ಪುರಂದರವಿಠಲ ಮುನಿವ ॥

---

೧ ಗ (೫) ಪ್ರತಿಯಿಂದ ತೆಗೆದುಕೊಂಡಿದೆ.
೨ ಖ ೧ (೪) ಪ್ರತಿಯಿಂದ ತೆಗೆದುಕೊಂಡಿದೆ.

## ೫೮

೧ ಅನ್ನಪಾನಾದಿಗಳೀಯೊ ಅಭ್ಯಾಗತ ಬ್ರಾಹ್ಮಣರಿಗೆ ।
ಅನ್ನಪಾನಾದಿಗಳೀಯೊ ಆ ಚಂಡಾಲಸಪ್ತರಿಗೆ ।
ಅನ್ನಪಾನಾದಿಗಳೀಯೊ ಅಂಧ-ದೀನ-ಕೃಪಣರಿಗೆ ।
ಹಸಿವೆಗೆ ಹಾಗವನ್ನರ್ಪಿಸೊ ಪುರಂದರವಿಠಲಗೆ ॥

## ೫೯

೨ ಚೋರನಾದರೂ ಚಂಡಾಲನಾದರೂ ।
ಬ್ರಹ್ಮಘ್ನ-ಪಿತೃಘಾತಕನಾದರೂ ।
ಆವನಾದರೂ ಮಧ್ಯಾಹ್ನಕಾಲಕೆ ।
ಅತಿಥಿಯಾಗಿ ಮನೆಗೆ ಬಂದರೆ ।
ತುತಿಸಿ ಅನ್ನವನಿಟ್ಟು ಸ್ವಾಮಿ ।
ಪುರಂದರವಿಠಲಗರ್ಪಿಸಬೇಕು ॥

## ೬೦

೩ ಶತ್ರುವಾಗಲಿ ಚೋರ-ಚಾಂಡಾಲನಾಗಲಿ ।
ಪಿತೃಘಾತಕಿಯಾಗಲಿ ಪ್ರೀತಿಮಾಡಲುಬೇಕು ।
ಅತಿಥಿಯಾಗಿ ಮಧ್ಯಾಹ್ನಕಾಲದಿ ಅವ ಬಂದು ಉಂಡರೆ ।
ಸ್ವರ್ಗವೀವ ಪುರಂದರವಿಠಲ ।
ವೈಕುಂಠವನೀವ ॥

---

೧ ಖ ೧ (ಳ) ಪ್ರತಿಯಿಂದ ತೆಗೆದುಕೊಂಡಿದೆ.
೨ ತ ಪ್ರತಿಯಿಂದ ತೆಗೆದುಕೊಂಡಿದೆ.
೩ ಖ ೧ (ಳ) ಪ್ರತಿಯಿಂದ ತೆಗೆದುಕೊಂಡಿದೆ.

೬೧

೧ ಪರರನ್ನ ಉಂಡ ಬ್ರಾಹ್ಮಣರಿಗೆ ।
ಇರದು ಮಾಡಿದ ಶುಭಕರ್ಮ ।
ಎರಡು ಮೂರು ಭಾಗ ಅನ್ನವಿತ್ತವನಿಗಯ್ಯ ।
ಉದರದಲಿ ಉಂಡ ಅನ್ನದೊಂದು ಭಾಗವುಳಿವುದು ।
ಪೊಡವಿಯಲ್ಲಿ ಪುರಂದರವಿಟ್ಠಲನು ಬಲ್ಲ ॥ ೧ ॥

೬೨

೨ ಎಡದ ಕೈಯಿಂದ ನೀರ ಎತ್ತಿ ಬಲದ ಕೈಯಲ್ಲಿಟ್ಟು ।
ಕುಡಿದರೆ ಆರಾದರಾಪೋಶನಕೆ ಮತ್ತದು ಮದ್ಯ ।
ಎಡೆಯನ್ನ ಗೋಮಾಂಸವೆಂದು ಶ್ರುತಿಸಾರುತಿದೆ ।
ಪೊಡವಿಯಲ್ಲಿ ಪುರಂದರವಿಠಲನಾಜ್ಞೆ ॥ ೧ ॥

೬೩

೩ ಕುಂದದ ದೀಪವ ನಂದಿಪನಿಗೆ ।
ಕೂಷ್ಮಾಂಡ ಒಡೆವಳಿಗೆ ।
ಎಂದೂ ಆಪೋಶನವ ತನ್ನ ಕೈ- ।
ಯಿಂದ ತಾನೆ ಎರೆದುಕೊಂಡು ಕುಡಿವಂಗೆ ।
ಇವರು ಮೂವರಿಗೆ ಕುಲನಾಶನವೆಂದು ।
ಅಂದೆ ಪುರಂದರವಿಠಲ ನಿರೂಪಿಸಿದನರಿಯು ॥ ೧ ॥

೧ ಗ (x) ಪ್ರತಿಯಿಂದ ತೆಗೆದುಕೊಂಡಿದೆ.
೨ ಗ (x) ಪ್ರತಿಯಿಂದ ತೆಗೆದುಕೊಂಡಿದೆ.
೩ ಗ (x) ಪ್ರತಿಯಿಂದ ತೆಗೆದುಕೊಂಡಿದೆ.

೬೪

೧ ಮನೆಯಲ್ಲಿ ವಿಪ್ರಪಾದೋದಕದ ಹೆಸರಿಲ್ಲದಿದ್ದರೆ ।
ಮನೆಯಲ್ಲಿ ವೇದ-ಶಾಸ್ತ್ರಧ್ವನಿ ಗರ್ಜಿಸದಿದ್ದರೆ ಮತ್ತೆ ।
ಮನೆಯಲ್ಲಿ ಸ್ವಾಹಾಕಾರ ಸ್ವಧಾಕಾರ ಮಾಡುವುದಿಲ್ಲದಿದ್ದರೆ ।
ಆ ಮನೆ ಸ್ಮಶಾನಕೆ ಸಮವೆಂಬ ಪುರಂದರವಿಠಲ ॥

೬೫

೨ ಹತ್ತು ಗೋದಾನಸಮವು ಹರವಾಹನ ವೃಷೋತ್ಸರ್ಜನ ।
ಹತ್ತು ವೃಷಗಳಿಗೆ ಸಮ ಹಾರುವ ಕುದುರೆಯ ದಾನ ।
ಹತ್ತು ಕುದುರೆಗಳಿಗೆ ಸಮ ಹಸ್ತಿಯ ದಾನ ಕಾಣಿರೊ ।
ಹತ್ತಾನೆಯ ಸಮ ಕ್ರತು ।
ಹತ್ತು ಕ್ರತುವಿಗೆ ಸಮ ಹರಿಭಕ್ತಗೆ ಕನ್ಯಾದಾನ ।
ಹತ್ತು ಕನ್ಯಾದಾನಸಮವು ಹಲವು ಜನಕೆ ಉದಕದಾನ ।
ಹತ್ತು ಉದಕದಾನಕೆ ಸಮ ಹಸಿದವಗೆ ಅನ್ನದಾನ ।
ನಿತ್ಯ ಪುರಂದರವಿಠಲನ ನೆನೆಯುವ ಪುಣ್ಯಕೆಣೆಯಿಲ್ಲವಯ್ಯ ॥

೬೬

೩ ಎಡೆಯ ನಾಡಿನಲೊಂದು ಸೋಜಿಗ ಹುಟ್ಟಿ
ಮಿದಿದು ಮಾಡಿದಂಥ ಕಣಕದ ರೊಟ್ಟಿ ।
ಅದಕೆ ಸಾಧನ ತೊವ್ವೆ-ತುಪ್ಪವನೊಟ್ಟಿ ।

---

೧ ಖ ೧ (೪) ಪ್ರತಿಯಿಂದ ತೆಗೆದುಕೊಂಡಿದೆ.
೨ ಖ ೧ (೪) ಧ ಪ್ರತಿಗಳಿಂದ ತೆಗೆದುಕೊಂಡಿದೆ.
೩ ಝ (೮) ಪ್ರತಿಯಿಂದ ಆರಿಸಿದೆ.

ಆದರ ಮೇಲೆ ಸಕ್ಕರೆಯನು ಒಟ್ಟಿ ।
ಆವನು ಮೆಲಬಲ್ಲ ಅವ ಜಗಜಟ್ಟಿ ।
ಪುರಂದರವಿಟ್ಠಲ ಸುಲಭವು ಗಟ್ಟಿ ॥ ೧ ॥

೬೭

೧ ಹಿರಿಯರ ದಿನದಲ್ಲಿ ಹೆಸರತೊವ್ವೆ ಅತ್ತೈಲಭಕ್ಷ್ಯ ।
ಗೋದಿ ಉದ್ದಿನಲ್ಲಿ ಮಾಡದಿರಲು ।
ಸರಿಯು ಕಾಗೆಯು ಮಾಂಸಕ್ಕೆಂದು ಶ್ರುತಿಸಾರುತಿದೆ ಜಗದೊಳು ।
ಪುರಂದರವಿಠಲನ ಆರಾರು ಎಲ್ಲ ಕೇಳಿ ॥ ೧ ॥

೬೮

೨ ಕುಟುಂಬಭರಣ ಎರಡಷ್ಟು ಬ್ರಾಹ್ಮಣರಿಗೆ ।
ವಿಧಿ ಗಡಗಡಿಸಿತು ಮೂರು ವಾನಸ್ಥರಿಗೆ ವಿಧಿಸಿತು ।
ಜಡಮತಿಯು ಬಿಟ್ಟು ಯತಿಗಳಿಗೆ ನಾಲ್ಕರಷ್ಟು ।
ಕುಂಡಲೀಶಯನ ಪುರಂದರವಿಠಲ ಈ ಪರಿ ।
ಪ್ರೌಢವಿಜನರಿಗೆ ವಿಧಿಕರ್ಮ ನಿರ್ಮಿಸಿದ ॥

೬೯

೩ ಮಾನವರು ಕೃತಯುಗದಿ ಮಾಡಬೇಕು ತಪವನು ।
ಜ್ಞಾನಸಾಧನ ಬೇಕು ತ್ರೇತಾಯುಗದಿ ।

೧ ಗ (x) ಪ್ರತಿಯಿಂದ ತೆಗೆದುಕೊಂಡಿದೆ.
೨ ಧ ಪ್ರತಿಯಿಂದ ತೆಗೆದುಕೊಂಡಿದೆ.
೩ ಧ ಪ್ರತಿಯಿಂದ ತೆಗೆದುಕೊಂಡಿದೆ.

ಏನೆಂಬೆ ದ್ವಾಪರದಿ ಯಜ್ಞ ಸಾಧನ ಬೇಕು ।
ಗಾನ ದಾನ ಬೇಕು ಕಲಿಯುಗದಿ ಪುರಂದರವಿಠಲ ॥

೭೦

೧ ಆಯುಸ್ಸು ಇದ್ದರೆ ಅನ್ನಕ್ಕೆ ಕೊರತೆಯಿಲ್ಲ ।
ಜೀವಕ್ಕೆ ಎಂದೆಂದಿಗೂ ತನುಗಳ ಕೊರತೆಯಿಲ್ಲ ।
ಸಾವು-ಹುಟ್ಟು ಸಹಜವೆಂಬ ಲೋಕದೊಳಗೆ ।
ಕಾಲಕಾಲದಿ ಹರಿಯ ಕಲ್ಯಾಣಗುಣಗಳ ।
ಕೇಳದವನ ಜನ್ಮ ವ್ಯರ್ಥ ಪುರಂದರವಿಠಲ ॥

೭೧

ರಾಗ—ನಾದನಾಮಕ್ರಿಯ ತಾಳ—ಆದಿ

೨ ಮಡಿ ಮಡಿ ಮಡಿಯೆಂದು ಮುಮ್ಮಾರು ಹಾರುತಿ ।
ಮಡಿಯೆಲ್ಲಿ ಬಂದಿತೊ ಬಿಕನಾಶಿ ॥ ಪ ॥

ಮಡಿಯು ನೀನೆ—ಮೈಲಿಗೆ ನೀನೆ— ।
ಸುಡಲಿ ನಿನ್ನ ಮಡಿ ಬಿಕನಾಶಿ ॥ ಅ ಪ ॥

ಎಲುವು-ಚರ್ಮ-ಮಲ-ಮೂತ್ರ ಗುಂಡಿಯಲಿ ।
ನಲಿಯುತ ನಿಂತೆಯೊ ಬಿಕನಾಶಿ ॥
ನೆಲೆಗೊಂಡ ನವದ್ವಾರದ ಹೊಲೆಯೊಳು ।
ಅಳಲುತ ನೀ ಬಿದ್ದೆ ಬಿಕನಾಶಿ ॥ ೧ ॥

---

೧ ಎ ಓ ಧ ಪ್ರತಿಗಳಿಂದ ಆರಿಸಿದೆ.
ಖ : (೧) ಪ್ರತಿಯಲ್ಲಿ ಇದರ ಕೊನೆಗೆ ಶ್ರೀಕೃಷ್ಣಮುದ್ರಿಕೆಯಿದೆ.
೨ ಓ ಪ್ರತಿಯಲ್ಲಿ ಮಾತ್ರ ಸಿಕ್ಕುತ್ತಿದೆ.

ಹುಟ್ಟಲು ಸೂತಕ ಸಾಯಲು ಸೂತಕ ।
ನಟ್ಟನಡುವೆ ಬಂತೆ ಬಿಕನಾಶಿ ॥
ಬಿಟ್ಟುಬಿಡದೆ ಕಾವೇರಿಯ ಮುಳುಗಲು ।
ಮುಟ್ಟು ಹೋಹುದೆ ಬಿಕನಾಶಿ ॥ ೨ ॥

ಚರ್ಮವ ತೊಳೆದರೆ ಕರ್ಮವು ಹೋಹುದೆ ।
ಮರ್ಮವ ತಿಳಿಯದೆ ಬಿಕನಾಶಿ ॥
ಬೊಮ್ಮನಯ್ಯ ಪುರಂದರವಿಠಲನ ಪಾಡಿ ।
ನಿರ್ಮಲದಿ ಬಾಳೆಲೊ ಬಿಕನಾಶಿ ॥ ೩ ॥

೭೨

ರಾಗ—ಶಂಕರಾಭರಣ ತಾಳ—ಆದಿ

೧ ಮಡಿ ಮಡಿ ಮಡಿಯೆಂದು ಅಡಿಗಡಿಗೆ ಹಾರುವೆ ।
ಮಡಿ ಮಾಡುವ ಬಗೆ ಬೇರುಂಟು ॥ ಪ ॥

ಪೊಡವಿಪಾಲಕನ ಧ್ಯಾನ ಮಾಡುವುದು ।
ಬಿಡದೆ ಭಜಿಸುವುದು ಅದು ಮಡಿಯೊ ॥ ಅ ಪ ॥

ಬಟ್ಟೆಯ ನೀರೊಳಗಿಟ್ಟು ಒಣಗಿಸಿ ।
ಉಟ್ಟರೆ ಅದು ತಾ ಮಡಿಯಲ್ಲ ॥
ಹೊಟ್ಟೆಯೊಳಗಿನ ಕಾಮ-ಕ್ರೋಧಗಳ ।
ಬಿಟ್ಟರೆ ಅದು ತಾ ಮಡಿಯೊ ॥ ೧ ॥

ಪರಧನ ಪರಸತಿ ಪರನಿಂದೆಗಳನು ।
ಜರೆದಹಂಕಾರಗಳನೆ ತೊರೆದು ॥

೧ ಅ (೧೧) ಪ್ರತಿಯಲ್ಲಿ ಏಳು ನುಡಿಗಳಿವೆ.
೨ ಝು (೯) px ಪ್ರತಿಗಳಲ್ಲಿ ೫ ನುಡಿಗಳಿವೆ.

ಹರಿಹರಿಯೆಂದು ದೃಢದಿ ಮನದಲಿ ।
ಇರುಳು ಹಗಲು ಸ್ಮರಿಸಲು ಮಡಿಯೊ ॥ ೨ ॥

ಎಚ್ಚರವಿಲ್ಲದೆ ಮಲ-ಮೂತ್ರ ದೇಹವ ।
ನೆಚ್ಚಿ ಕೆಡಲು ಬೆಡೆಲೊ ಮನವೆ ॥
ಅಚ್ಯುತಾನಂತನ ನಾಮವ ಮನಗೊಂಡು ।
ಸಚ್ಚಿಂತೆಯಲಿರುವುದೆ ಮಡಿಯೊ ॥ ೩ ॥

ಭೂಸುರರು ಮಧ್ಯಾಹ್ನಕಾಲದಲಿ ।
ಹಸಿದು ಬಳಲಿ ಬಂದರೆ ಮನೆಗೆ ॥
ಬೇಸತ್ತು ನಮಗೆ ಗತಿಯಿಲ್ಲ ಹೋಗೆಂದು ।
ಹಸನಾಗಿ ಉಂಬುವುದು ಅದು ಮಡಿಯೊ ? ॥ ೪ ॥

ದಶಮಿ-ದ್ವಾದಶಿಯ ಪುಣ್ಯಕಾಲದಲಿ ।
ವಸುದೇವಸುತನ ಪೂಜಿಸದೆ ॥
ದೋಷಕಂಜದೆ ಪರರನ್ನ ಭುಜಿಸಿ ಯಮ- ।
ಪಾಶಕೆ ಬೀಳ್ವುದು ಹುಸಿಮಡಿಯೊ ! ॥ ೫ ॥

ಸ್ನಾನ-ಸಂಧ್ಯಾನ ಮೊದಲಾದ ಕರ್ಮಗಳಿಲ್ಲ ।
ಜ್ಞಾನ-ಮಾನ-ಸುಮ್ಮಾನದಿಂದ ॥
ದೀನವಂದ್ಯನ ಸುಜನ ಸಂತರ್ಪಣ ।
ಅನುದಿನ ಮಾಡುವುದು ಘನಮಡಿಯೊ ॥ ೬ ॥

ಗುರು-ಹಿರಿಯರ ಹರಿದಾಸರ ನೆನೆದು ।
ಚರಣಕೆರಗಿ ಭಯಭಕ್ತಿಯಿಂದ ।
ಪರಿಪರಿ ವಿಧದಲಿ ಪುರಂದರವಿಠಲನ ।
ನೆರೆನಂಬುವುದು ಉತ್ತಮ ಮಡಿಯೊ ॥ ೭ ॥

## ೨೩

ರಾಗ—ಪೂರ್ವಿ ತಾಳ—ಅಟ

೧ ಸುಮ್ಮನೆ ವೈಷ್ಣವನೆಂದಿರಿ——ಪರ- ।
ಬ್ರಹ್ಮ ಸುಜ್ಞಾನವನರಿಯದ ಮನುಜನ ॥ ಪ ॥

ಮುಖವ ತೊಳೆದು ನಾಮವಿಟ್ಟವನಲ್ಲದೆ ।
ಮಿಕ್ಕ ಶಾಸ್ತ್ರಂಗಳ ನೋಡಿದನೆ ? ॥
ಸುಖಶೃಂಗಾರಕೆ ಮಾಲೆ ಧರಿಸಿದನಲ್ಲದೆ ।
ಭಕುತಿಯ ರಸದೊಳು ಮುಳುಗಿದನೇನಯ್ಯ ॥ ೧ ॥

---

೧ ಕ. ವಿ. ವಿ. ತಾಳೆಗರಿ (೧೮೫೨–೧೯೫೦) ಪ್ರತಿಯಿಂದ ತೆಗೆದುಕೊಂಡಿದೆ.

ವಿ. ಸೂ.:— ಎ ಪ್ರತಿಯಲ್ಲಿ ಈ ಹಾಡು ರಂಗವಿಠಲನ ಮುದ್ರಿಕೆಯಿಂದಲೂ ಅಚ್ಚಾಗಿದೆ. ಅ (೧) ಪ್ರತಿಯಲ್ಲಿ ಇದೇ ಹಾಡು ತೀರ ಭಿನ್ನಪಾಠಾಂತರಗಳಿಂದ ಕೂಡಿದೆ. ಅದನ್ನು ಇಲ್ಲಿ ಇಡಿಯಾಗಿ ಬರೆದಿದೆ. ಆ (II) ಪ್ರತಿಯಲ್ಲಿ ಬೇರೆ ಎರಡು ನುಡಿಗಳಿವೆ.

ಸುಮ್ಮನೆ ವೈಷ್ಣವನೆಂಬರು— ಬರಿ- ।
ಹೆಮ್ಮೆಯಿಂದ ನಾ ತಿರುಗಿದೆನಲ್ಲದೆ ॥ ಪ ॥

ನಾಡ ಮಾತುಗಳ ನಾನಾಡಿದೆನಲ್ಲದೆ ।
ಮಾಡಿದೆನೆ ನಾರಾಯಣನ ಸ್ಮರಣೆ ।
ಕೂಡೆ ಅಡಗುವ ದೇಹ ನೆಚ್ಚಿ ಬಿಡದೆ ಕೊಂ- ।
ಡಾಡಿದೆ ಹರಿಯೆಂದು ಪಾಡಿದೆನೆ? ॥ ೧ ॥

ಮುಖವ ತೊಳೆದು ನಾಮವನಿಟ್ಟೆನಲ್ಲದೆ ।
ಸಕಲ ವೇದಂಗಳ ಕೇಳಿದೆನೆ ? ॥
ಸುಖಶೃಂಗಾರಕೆ ಮಾಲೆ ಹಾಕಿದೆನಲ್ಲದೆ ।
ಭಕುತಿ ರಸದೊಳೋಲಾಡಿದೆನೆ ? ॥ ೨ ॥

ಇಂತು ಮನುಜನಾಗಿ ಪುಟ್ಟಿದೆನಲ್ಲದೆ ।
ಸಂಧದಿ ಪ್ರಹ್ಲಾದನಂತಿಹೆನೆ ? ॥
ಕಂತುಜನಕ ಶ್ರೀಪುರಂದರವಿಟ್ಠಲ ।
ಮಂತ್ರವಾಹಕ ನಿನ್ನನೆಂತೆಂದೆನೆ ? ॥ ೩ ॥

ಊರ ಮಾತುಗಳೆಲ್ಲನಾಡಿದನಲ್ಲದೆ ।
ನಾರಾಯಣ ಕೃಷ್ಣ ಶರಣೆಂದನೆ ?॥
ನಾರಿಯರಿಗೆ ಮೆಚ್ಚಿ ಮರುಳಾದನಲ್ಲದೆ ।
ಗುರುಹಿರಿಯರಿಗೆಲ್ಲ ಎರಗಿದನೇನಯ್ಯ ॥ ೨ ॥

ಗಂಗೆಯಲಿ ಮಣ್ಣು ತೊಳೆವವನಲ್ಲದೆ ।
ಹಿಂಗದೆ ಸ್ನಾನವ ಮಾಡಿದನೆ? ॥
ರಂಗ ಶ್ರೀಪುರಂದರವಿಠಲನ ದಾಸರ ।
ಸಂಗಡ ಕೂಡಾಡಿ ತಿರುಗಿದನೇನಯ್ಯ ॥ ೩ ॥

## ೭೪

ರಾಗ—ಪಂತುವರಾಳಿ ತಾಳ—ಝಂಪೆ

೧ ಇಂತು ಶ್ರುತಿ-ಸ್ಮೃತಿ ಸಾರುತಿದೆ ಕೋ ।
ಕಂತುಪಿತನ ಗುಣಗಳ ತಿಳಿಯಬೇಕೆಂದು ॥ ಪ ॥

ಮನವ ಶ್ರೀಹರಿಯ ಚರಣಕೆ ಸಮರ್ಪಿಸಬೇಕು ।
ತನುವ ತೊಂಡರಿಗಡ್ಡ ಕೆಡವಬೇಕು ॥
ವನಿತೆಯರ ಚೆಲುವಿಕೆಗೆ ಮರುಳಾಗದಿರಬೇಕು ।
ಘನತೆಯಲಿ ಹರಿಚರಣ ಸ್ಮರಿಸುತಿರಬೇಕು ॥ ೧ ॥

ಕಂದರ್ಪನಟ್ಟುಳಿಗೆ ಕಳವಳಿಸದಿರಬೇಕು ।
ಇಂದ್ರಿಯಂಗಳನು ನಿಗ್ರಹಿಸಬೇಕು ॥
ಚೆಂದಲೀಲೆಗಳಿಂಗೆ ಮನವೆಳಸದಿರಬೇಕು ।
ಇಂದಿರೇಶನ ಪದದ ಪಥವರಿಯಬೇಕು ॥ ೨ ॥

ಒಂಟಿಯಲಿ ಮುನಿಗಳಾಶ್ರಮದಿ ನೆಲಸಲುಬೇಕು ।
ಹೆಂಟೆ ಬಂಗಾರ ಸಮ ತಿಳಿಯಬೇಕು ॥

೧. ಖ ೧ (೭) ಪ್ರತಿಯಿಂದ ಆರಿಸಿದೆ.

ಕಂಟಕದ ಭಯಗಳನು ನೀಗುತಿರಬೇಕು ವೈ- ।
ಕುಂಠ ಪುರಂದರವಿಠಲನೊಲಿಸಬೇಕು ॥ ೩ ॥

## ೭೫

### ಉಗಾಭೋಗ

೧ ಹಸಿವಾಯಿತೇಳು ದೇವರ ತೊಳೆ ಎಂಬರು ।
ಹಸನಾಗಿ ಮನಮುಟ್ಟಿ ಪೂಜೆಯಮಾಡರು ! ।
ಹಾಸಿ ಹಾವಿನ ಬುಟ್ಟಿಯಂತೆ ಮುಂದಿಟ್ಟುಕೊಂಡು ।
ವಸುಧೆಯೊಳಗೆ ಉರಗಗಾರನ ಆಟವಾಡುವರಯ್ಯ ।
ಪರಧನ ಪರಸತಿ ಪರದ್ರವ್ಯಕ್ಕೆರಗುವರು ।
ತೊರೆಯದಿದ್ದರೆ ದುರಿತ ಪೋಗುವುದೆ? ।
ಸರುವವೆಲ್ಲವ ತೊರೆದು ಹರಿಯ ಧ್ಯಾನವ ಮಾಡಿದರೆ ।
ವರವ ಕೊಡುವ ನಮ್ಮ ಪುರಂದರವಿಠಲ ॥

## ೭೬

ರಾಗ—ಆಹೇರಿ ತಾಳ—ಅಟ

೨ ಆಚಾರವಿಲ್ಲದ ನಾಲಗೆ—ನಿನ್ನ- ।
ನೀಚಗುಣವ ಬಿಡು ನಾಲಗೆ ॥ ಪ ॥

ನಾಚಿಕೆ-ಲಜ್ಜೆಯು ನೀ ಮುನ್ನ ಅರಿಯದೆ ।
ಚಾಚಿಕೊಂಡಿರುವಂಥ ನಾಲಗೆ ॥ ಅ ಪ ॥

ಇಷ್ಟ ಮಾತನಾಡು ನಾಲಗೆ—ಹಿಡಿ- ।
ದೊಡ್ಡರೂ ಹುಸಿಬೇಡ ನಾಲಗೆ ॥

೧ ಎ ಓ ಧ ಪ್ರತಿಗಳಿಂದ ಆರಿಸಿಕೊಂಡಿದೆ.
೨ ಗ (E) ಪ್ರತಿಯಿಂದ ಆರಿಸಿದೆ.

ಇದ್ದು ಕೊಂಡು ಉಣ್ಣು ಅಮೃತಾನ್ನಗಳನು ।
ಬುದ್ಧಿಯಲಿರು ಕಂಡೆಯ ನಾಲಗೆ ॥ ೧ ॥

ಬಡವರ ಮಾತಿಗೆ ನಾಲಗೆ—ನೀ- ।
ಕಡುಚತುರ ನುಡಿಯದಿರು ನಾಲಗೆ ॥
ಹಿಡಿದು ಕೊಂಡೊಯ್ವರು ಯಮನ ಭಟರು ನಿನ್ನ ।
ನುಡಿ ಕಂಡೆಯ ಹರಿಯೆಂದು ನಾಲಗೆ ॥ ೨ ॥

ಹರಿಪಾದವೆ ಗತಿಯೆಂದು ನಾಲಗೆ—ನಿನಗೆ- ।
ಪರರ ಚಿಂತೆಯೇಕೆ ನಾಲಗೆ ॥
ಸಿರಿವರ ಪುರಂದರವಿಠಲರಾಯನನು ।
ಮರೆಯದೆ ನೆನೆ ಕಂಡೆಯ ನಾಲಗೆ ॥ ೩ ॥

## ೭೭

ರಾಗ—ಕಾಂಬೋದಿ ತಾಳ—ಝಂಪೆ

೧ ಸತ್ಯವೇ ಸ್ನಾನ-ಜಪ-ನೇಮ-ಹೋಮ-—ಅ- ।
ಸತ್ಯದಲಿ ನಡೆದು ಮಾಳ್ಪುದು ವ್ಯರ್ಥಕರ್ಮ ॥ ಪ ॥

ಅಪ್ಪಳಿಸಿ ಪರರ ದ್ರವ್ಯಗಳನ್ನು ತಂದುಂಡು ।
ಒಪ್ಪದಲಿ ಉಪವಾಸ ವ್ರತವ ಮಾಡಿ ॥
ತಪ್ಪದಲೆ ತಾ ಸ್ವರ್ಗ ಸೂರೆಗೊಂಬುವೆನೆಂಬ ।
ಸರ್ಪಗಳು ಮಾಡಿದಪರಾಧವೇನಯ್ಯ ? ॥ ೧ ॥

ಬಿಡದೆ ಮದ-ಮತ್ಸರಾಹಂಕಾರದೊಳು ಮುಳುಗಿ ।
ಒಡನೆ ಬೆರಳುಗಳೆಣಿಸಿ ಮೌನದಿಂದ ॥

೧ ಆ (II) ಪ್ರತಿಯಿಂದ ತೆಗೆದುಕೊಂಡಿದೆ.

ತಡೆಯದಲೆ ಪರಲೋಕಸುಖವನೈದುವೆನೆಂಬ ।
ಬಡಬಕವು ಮಾಡಿದಪರಾಧವೇನಯ್ಯ ? ॥ ೨ ॥

ಪರಸತಿಯು ಪರಧನವು ಪರನಿಂದೆ ಪರಹಿಂಸೆ ।
ಪರಮಪಾತಕದ ಕಾರಣವ ತೊರೆದು ॥
ಧರೆಗಧಿಕ ಪುರಂದರವಿಟ್ಠಲನ ನೆರೆಭಜಿಸಿ ।
ವರವನು ಪಡೆಯೆ ಸಾಲೋಕ್ಯವನ್ನೀವ ॥ ೩ ॥

೭೮

ರಾಗ—ಕಲ್ಯಾಣಿ ತಾಳ—ಅಟ

೧ ಪರಾನ್ನವೇತಕೆ ಬಂತಯ್ಯ—ಎನಗೆ ಇಂದು- ।
ಪರಾನ್ನವೇತಕೆ ಬಂತಯ್ಯ ? ॥ ಪ ॥

ಪರಾನ್ನವೇತಕೆ ಬಂತು ಪರಮೇಷ್ಠಿಜನಕನ ।
ಪರನೆಂದು ತಿಳಿಸದೆ ಪರಗತಿ ಕೆಡಿಸುವ ॥ ಅ ಪ ॥

ಸ್ನಾನವ ಮಾಡಿಕೊಂಡು—ಕುಳಿತು ಬಹು ।
ಮೌನದಿಂದಿರಲೀಸದು ॥
ಶ್ರೀನಿವಾಸನ ಧ್ಯಾನಮಾಡದೆ ಮನವಿದು ।
ತಾನೆ ಓಡುವುದು ಶ್ವಾನನೋಪಾದಿಯಲಿ ॥ ೧ ॥

ಜಪವ ಮಾಡುವ ಕಾಲದಿ—ಕರೆಯು ಬರೆ- ।
ವಿಪರೀತವಾಗುವುದು ॥
ಸ್ವಪನದಂತೆ ಪೊಳೆದು ನನ್ನ ಮನಕೆ ಬಲು ।
ಸುಪಥವ ತಪ್ಪಿಸಿ ಅಪಗತಿ ಕೊಡುವಂಥ ॥ ೨ ॥

೧ ಅ (೮) ಪ್ರತಿಯಲ್ಲಿ ಮಾತ್ರ ಸಿಕ್ಕುತ್ತದೆ.

ಪ್ರಸ್ಥದ ಮನೆಯೊಳಗೆ—ಕರೆಯದೆ ಪೋಗಿ- |
ಸ್ವಸ್ಥದಿ ಕುಳಿತುಕೊಂಡು ||
ವಿಸ್ತಾರವಾಗಿ ಹರಟೆಯನೆ ಬಡಿದು ಪ್ರ- |
ಶಸ್ತವಾಯಿತು ಎಂದು ಮಸ್ತಕ ತಿರುವುವ || ೩ ||

ಯಜಮಾನನು ಮಾಡಿದ—ಪಾಪಂಗಳ- |
ವ್ರಜವು ಅನ್ನದೊಳಿರಲು ||
ದ್ವಿಜರು ಭುಂಜಿಸಲಾಗಿ ಅವರ ಉದರದೊಳು |
ನಿಜವಾಗಿ ಸೇರುವುದು ಸುಜನರು ಲಾಲಿಸಿ || ೪ ||

ಮಾಡಿದ ಮಹಾಪುಣ್ಯವು—ಓದನಕಾಗಿ- |
ಕಾಡಿಗೊಪ್ಪಿಸಿಕೊಡುತ ||
ರೂಢಿಗಧಿಕನಾದ ಪುರಂದರವಿಠಲನ |
ಪಾಡಿ ಪೊಗಳಿ ಕೊಂಡಾಡಿಕೊಂಡಿರದಂತೆ || ೫ ||

## ೭೯

ರಾಗ—ಕಾಂಬೋದಿ ತಾಳ—ಆದಿ

೧ ಇರಬೇಕು—ಹರಿದಾಸರ ಸಂಗ |
ವರಜ್ಞಾನಿಗಳ ದಯ ಸಂಪಾದಿಸಬೇಕು || ಪ ||

ಅತಿಜ್ಞಾನಿಯಾಗಿ ಹರಿಕಥೆಯ ಕೇಳಬೇಕು |
ಯತಿಗಳ ಪಾದಕ್ಕೆ ಎರಗಬೇಕು ||
ಸತಿ-ಸುತರಿದ್ದು ಮಮತೆಯನು ಬಿಡಬೇಕು ||
ಗತಿಯೆಂದು ಬಿಡದೆ ಹರಿಯ ಪೂಜಿಪರಸಂಗ || ೧ ||

---

೧ ಇ (ಊ) ಜ ಪ್ರತಿಗಳಿಂದ ಆರಿಸಿದೆ.

ನಡೆ ಯಾತ್ರೆಯೆನಬೇಕು ನುಡಿ-ನೇಮವಿರಬೇಕು ।
ಬಿಡದೆ ಹರಿಯ ಪೂಜೆಯ ಮಾಡಬೇಕು ॥
ಅಡಿಗಡಿಗೆ ಬಂದು ಹರಿಗಡ್ಡಬೀಳಬೇಕು ।
ಬಿಡದೆ ಹರಿಭಜನೆಯ ಮಾಡುವರ ಸಂಗ ॥ ೨ ॥

ಹರಿ-ಹರ-ವಿರಂಚಿಯರ ಪರಿಯ ತಿಳಿಯಬೇಕು ।
ತರತಮದಿ ರುದ್ರ-ಇಂದ್ರಾದಿಗಳ ॥
ಅರಿಯದಿದ್ದರೆ ಗುರುಹಿರಿಯರ ಕೇಳಬೇಕು ।
ಪರಮಾನಂದದಲಿ ಓಲಾಡುವರ ಸಂಗ ॥ ೩ ॥

ಷಟ್ಕರ್ಮ ಮಾಡಬೇಕು ವೈಷ್ಣವನೆನಿಸಬೇಕು ಉ- ।
ತ್ಕೃಷ್ಟ ವೈರಾಗ್ಯ ಬೇಕು ದುಷ್ಟಸಂಗ ಬಿಡಬೇಕು ॥
ವಿಷ್ಣುವಿನ ದಾಸರ ದಾಸನಾಗಲುಬೇಕು ।
ಎಷ್ಟು ಕಷ್ಟಬಂದರೂ ಹರಿಯ ಭಜಿಪರ ಸಂಗ ॥ ೪ ॥

ಏಕಾಂತ ಕುಳ್ಳಿರಬೇಕು ಲೋಕವಾರ್ತೆ ಬಿಡಬೇಕು ।
ಲೋಕೈಕನಾಥನ ಭಜಿಸಬೇಕು ॥
ಸಾಕು ಸಂಸಾರವೆಂದು ಕಕ್ಕುಲತೆ ಬಿಡಬೇಕು ।
ಶ್ರೀಕಾಂತ ಪುರಂದರವಿಠಲರಾಯನ ಸಂಗ ॥ ೫ ॥

# ೪ ಮಾನವನೀತಿ

## (೧) ದೇಹ-ಕುಲ

### ೮೦

**ರಾಗ—ಶಂಕರಾಭರಣ** **ತಾಳ—ಆದಿ**

೧ ಮನುಜಶರೀರವಿದೇನು ಸುಖ—ಇದ- ।
ನೆನೆದರೆ ಘೋರವಿದೇನು ಸುಖ ? ॥ ಪ ॥

ಜನನ-ಮರಣ ಮಲಕೂಪದಲಿದ್ದು ।
ಅನುಭವಿಸುವುದು ಇದೇನು ಸುಖ ? ॥
ತನುವಿದ್ದಾಗಲೆ ಹೃದಯದ ಶೌಚದ ।
ಸ್ತನಗಳನುಂಬುವುದೇನು ಸುಖ ? ॥ ೧ ॥

ದಿನವು ಹಸಿವು ತೃಷೆ ಘನರೋಗಂಗಳ ।
ಅನುಭವಿಸುವುದು ಇದೇನು ಸುಖ ? ॥
ನೆನೆಯಲು ನಿತ್ಯ ನೀರ್ಗುಳ್ಳೆಯಂತಿಪ್ಪ ।
ತನುಮಲಭಾಂಡವಿದೇನು ಸುಖ ? ॥ ೨ ॥

ಪರಿಪರಿ ವಿಧದಲಿ ಪಾಪವ ಗಳಿಸುತ ।
ನರಕಕೆ ಬೀಳುವುದೇನು ಸುಖ ? ॥
ಪುರಂದರವಿಠಲನ ಮನದಿ ನೆನೆದು ಸ- ।
ದ್ಧರುಮದೊಳ್ ನಡೆದರೆ ಆಗ ಸುಖ ॥ ೩ ॥

---

೧ ಆ (೧) ಮ ಜ್ಞಾ ಶ್ರೀ ಪ್ರತಿಗಳಿಂದ ತೆಗೆದುಕೊಂಡಿದೆ.

## ೮೧

ರಾಗ—ಮಧ್ಯಮಾವತಿ ತಾಳ—ಅಟ

೧ ಹಿಗ್ಗುವೆಯೇಕೊ—ಏ ಮನುಜಾ ।
ಹಿಗ್ಗುವೆಯೇಕೊ ॥ ಪ ॥

ಹಿಗ್ಗುವ ತಗ್ಗುವ ಮುಗ್ಗುವ ಕುಗ್ಗುವ ।
ಅಗ್ನಿಯೊಳಗೆ ದಗ್ಧವಾಗುವ ದೇಹಕೆ ॥ ಅ ಪ ॥

ಸತಿಪುರುಷರು ತಮ್ಮ ರತಿಕ್ರೀಡೆಗಳ ಮಾಡೆ ।
ಪತವಾದಿಂದ್ರಿಯ ಪ್ರತಿಮೆಯು ದೇಹಕೆ ॥ ೧ ॥

ತೋರುವುದೊಂಬತ್ತು ದಾರಿಯ ಮಲವಾದ ।
ನೀರಿಲ್ಲದಿದ್ದರೆ ನಾರುವ ದೇಹಕೆ ॥ ೨ ॥

ಆಗದ ಭೋಗದ ಆಗುಮಾಡುತಲಿಪ್ಪ ।
ರೋಗಬಂದರೆ ಬಿದ್ದುಹೋಗುವ ದೇಹಕೆ ॥ ೩ ॥

ನರರ ಸೇವೆಯಮಾಡಿ ನರಕಭಾಜನನಾಗಿ ।
ಮರಳಿ ಮರಳಿ ಹುಟ್ಟಿ ನರಳುವ ದೇಹಕೆ ॥ ೪ ॥

ಪುರಂದರವಿಠಲನ ಚರಣಕಮಲಕ್ಕೆ ।
ಎರಗದೆ ಇರುತಿಪ್ಪ ಗರುವಿನ ದೇಹಕೆ ॥ ೫ ॥

## ೮೨

ರಾಗ—ಕಾಂಬೋದಿ ತಾಳ—ಅಟ

೨ ಏನು ಇಲ್ಲದ ಎರಡು ದಿನದ ಸಂಸಾರ ।
ಜ್ಞಾನದಲಿ ದಾನ-ಧರ್ಮವ ಮಾಡೊ ಮನುಜಾ ॥ಪ॥

---

೧ ಕ. ವಿ. ವಿ. ತಾಳೆಗರಿ (೧೫೪-೧೩೫) ಪ್ರತಿಯಿಂದ ಆರಿಸಿಕೊಂಡಿದೆ.
ಅ (೧) ಆ (VI) ೨೨ (೧೦) ಪ್ರತಿಗಳಲ್ಲಿ ಈ ಹಾಡು ಬಹಳ ವಿಕಾರಗೊಂಡಿದೆ.
೨ ಅ (೧೧) ಶ್ರೀ ಪ್ರತಿಯಿಂದ ತೆಗೆದುಕೊಂಡಿದೆ.

ಹಸಿದುಬಂದವರಿಗೆ ಅಶನವೀಯಲುಬೇಕು।
ಶಿಶುವಿಗೆ ಪಾಲ್ಬೆಣ್ಣೆ ಇರಿಸಬೇಕು॥
ಹಸನಾದ ಭೂಮಿಯ ಧಾರೆಯೆರೆಯಲುಬೇಕು।
ಭಾಷೆಕೊಟ್ಟರೆ ಮಾತು ನಿಜವಿರಲುಬೇಕು ॥ ೧ ॥

ಕಳ್ಳತನವನು ಮಾಡಿ ಒಡಲಹೊರೆಯಲುಬೇಡ।
ತಳ್ಳಿಕಾರನಾಗಿ ತಿರುಗಬೇಡ॥
ಕುಳ್ಳಿರ್ದ ಸಭೆಯಲಿ ಕುತ್ಸಿತವಾಡಲುಬೇಡ।
ಉಳ್ಳವ ನಾನೆಂದು ಉಬ್ಬಲುಬೇಡ ॥ ೨ ॥

ದೊರೆತನವನೆ ಮಾಡಿ ಕೆಟ್ಟ ನುಡಿಯಲುಬೇಡ।
ಪರಧನಕೆ ಪರಸತಿಗೆ ಅಳುಪಬೇಡ॥
ಧರಣಿಯೊಳಗೆ ನಮ್ಮ ಪುರಂದರವಿಠಲನ।
ಚರಣಸೇವೆಯ ಬಿಟ್ಟು ಇರಬೇಡ ಮನುಜಾ ॥ ೩ ॥

## ೮೩

ರಾಗ—ಪೂರ್ವಕಲ್ಯಾಣಿ ತಾಳ—ಆದಿ

೧ ಲೊಳಲೊಟ್ಟೆ—ಬದುಕು—ಲೊಳಲೊಟ್ಟೆ ॥ ಪ ॥
ಆನೆ ಕುದುರೆ ಮಂದಿ ಲೊಳಲೊಟ್ಟೆ—ಬಲು-।
ಸೈನ್ಯ ಭಂಡಾರವು ಲೊಳಲೊಟ್ಟೆ॥

೧ ಅ (II) ಶ್ರೀ ಪ್ರತಿಗಳಿಂದ ತೆಗೆದುಕೊಂಡಿದೆ.
ಆ (II) ಪ್ರತಿಯಲ್ಲಿ ಕೆಳಗಿನ ಮತ್ತೊಂದು ನುಡಿಯಿದೆ.

ಹೆಂಡಿರು-ಮಕ್ಕಳು ಲೊಳಲೊಟ್ಟೆ—ಬಲು-।
ಭಂಡಾರ ಮನೆಯು ಲೊಳಲೊಟ್ಟೆ॥
ಪುಂಡರೀಕಾಕ್ಷ ಶ್ರೀಪುರಂದರವಿಠಲನ।
ಕೊಂಡಾಡದ ಮನುಜ ತಾ ಲೊಳಲೊಟ್ಟೆ॥

ಮಾನಿನಿಯರ ಸಂಗ ಲೊಳಲೊಟ್ಟೆ—ಮಹಾ- ।
ಮಾನ್ಯ-ವಿಜಯರೆಲ್ಲ ಲೊಳಲೊಟ್ಟೆ ॥ ೧ ॥

ಮುತ್ತು-ಮಾಣಿಕ-ಚಿನ್ನ ಲೊಳಲೊಟ್ಟೆ—ಬಲು- ।
ಛತ್ರ-ಚಾಮರಗಳು ಲೊಳಲೊಟ್ಟೆ ॥
ಸುತ್ತಗಳು ಕೋಟೆಯು ಲೊಳಲೊಟ್ಟೆ—ಅಲ್ಲಿ- ।
ಸುತ್ತುವ ಜನವೆಲ್ಲ ಲೊಳಲೊಟ್ಟೆ ॥ ೨ ॥

ನಂಟರು-ಇಷ್ಟರು ಲೊಳಲೊಟ್ಟೆ—ದೊಡ್ಡ- ।
ಕಂಟಕಾನಾಹೊದು ಲೊಳಲೊಟ್ಟೆ ॥
ಉಂಟಾವ ಗುಣನಿಧಿ ಪುರಂದರವಿಠಲನ ।
ಬಂಟನಾಗದವ ಲೊಳಲೊಟ್ಟೆ ॥ ೩ ॥

## ೮೪

ರಾಗ—ಸಾರಂಗ ತಾಳ—ಝಂಪೆ

೧ ಹಮ್ಮನಾಡಲಿಬೇಡ ಹಮ್ಮು ಈಡೇರದು ।
ಹಮ್ಮಿನಿಂದಲಿ ನೀವು ಕೆಡಬೇಡಿರಯ್ಯ ॥ ಪ ॥

ಮುನ್ನೊಮ್ಮೆ ರಾವಣನು ಜನಕನಾ ಸಭೆಯಲ್ಲಿ ।
ತನ್ನಳವನರಿಯದಲೆ ಧನುವೆತ್ತಲು ॥
ಉನ್ನತದ ಆ ಧನು ಎದೆಯ ಮೇಲೆ ಬೀಳಲು ।
ಬನ್ನಬಟ್ಟುದ ನೀವು ಕೇಳಬಲ್ಲಿರಯ್ಯ ॥ ೧ ॥

ಕುರುಪತಿಯು ಸಭೆಯಲ್ಲಿ ಕೃಷ್ಣ ತಾ ಬರಲಾಗಿ ।
ಕರೆದು ಮನ್ನಣೆಯನ್ನು ಮಾಡದಿರಲು ॥

೧ ಅ (VI) ಪು ([illegible]) ಬ [illegible] ಪ್ರತಿಗಳಿಂದ ಆರಿಸಿದೆ.

ಧರೆಗೆ ಶ್ರೀಕೃಷ್ಣನಂಗುಟವನಂಜೊತ್ತಲು ।
ಅರಸು ಆಸನ ಬಿಟ್ಟು ಉರುಳಾಡಿದ ॥ ೨ ॥

ಅತಿ ವೇಗದಲಿ ಕೃಷ್ಣ ಸತ್ಯಭಾಮೆಯ ಕರೆದು ।
ಸೀತೆ ನೀನಾಗೆಂದು ನೇಮಿಸಿದನು ॥
ಮತಿವಂತೆ ಬಗೆಬಗೆಯ ಶೃಂಗಾರವಾದರೂ ।
ಸೀತಾಸ್ವರೂಪ ತಾನಾಗಲಿಲ್ಲ ॥ ೩ ॥

ಹನುಮನನು ಕರೆಯೆಂದು ಖಗಪತಿಯನಟ್ಟಲು ।
ಮನದಲ್ಲಿ ಕಡುಕೋಪದಿಂದ ನೊಂದು ॥
ವಾನರನೆ ಬಾಯೆಂದು ಗರುಡ ತಾ ಕರೆಯಲು ।
ಹನುಮ ಗರುಡನ ತಿರುಹಿ ಬೀಸಾಡಿದ ॥ ೪ ॥

ಇಂತಿಂತು ದೊಡ್ಡವರು ಈ ಪಾಟುಪಟ್ಟಿರಲು ।
ಪಂಥಗಾರಿಕೆ ತರವೆ ನರಮನುಜಗೆ? ॥
ಚಿಂತಾಯತನು ಚೆಲ್ವ ಪುರಂದರವಿಠಲನ ।
ಸಂತತವು ನೆನೆ-ನೆನೆದು ಸುಖಿಯಾಗೊ ಮನುಜ ॥ ೫ ॥

## ೮೫

ರಾಗ—ಕಾಂಬೋದಿ ತಾಳ—ಝಂಪೆ

೧ ಮಾನಹೀನರಿಗೆ ಅಭಿಮಾನವೇಕೆ—ಪ್ರ- ।
ಧಾನಿಯಿಲ್ಲದ ಅರಸುತನವೇಕೆ ಕೃಷ್ಣಾ ? ॥ ಪ ॥
ಕಾಡಿನೊಳು ತಿರುಗುವಗೆ ಕನಕಭೂಷಣವೇಕೆ ? ।
ಓಡಿನಲಿ ಉಂಬುವಗೆ ಹರಿವಾಣವೇಕೆ ? ॥
ಬೇಡಿದರೆ ಕೊಡದ ಲೋಭಿಗೆ ಬಿಂಕವೇಕೆ ? ।
ಪಾಡಲರಿಯದೆ ಪ್ರೌಢತನವೇಕೆ ಕೃಷ್ಣಾ ? ॥ ೧ ॥

೧ ಕ. ವಿ. ವಿ. ತಾಳೆಗರಿ ( ೮೫೮- ೭೫೦) ಪ್ರತಿಯಿಂದ ತೆಗೆದುಕೊಂಡಿದೆ.

ಪತಿ ವಿಚಾರಿ ನಡೆವವಳ ವ್ರತ-ನೇಮತನವೇಕೆ ? ।
ಸತಿಗಳುಕಿ ನಡೆವವಗೆ ಸ್ವಾತಂತ್ರ್ಯವೇಕೆ ? ॥
೧ ಮತಿಗೆಟ್ಟು ತಿರುಗುವಗೆ ಮಂತ್ರ-ತಂತ್ರಗಳೇಕೆ ? ।
ಅತಿಯಾಶೆ ಬಿಡದ ಸಂನ್ಯಾಸಿ ತಾನೇಕೆ ॥ ೨ ॥

ಕಾಮವಿಲ್ಲದವಂಗೆ ಕಾಂತೆಯರ ಗೊಡವೇಕೆ ? ।
ಪ್ರೇಮವಿಲ್ಲದ ಬಂಧು-ಬಳಗವೇಕೆ ? ॥
ಸ್ವಾಮಿ ಶ್ರೀಪುರಂದರವಿಟ್ಠಲನ ನೆನೆಯದ ।
ತಾಮಸದ ಜನರಿಂಗೆ ಕೈವಲ್ಯವೇಕೆ ? ॥ ೩ ॥

## ೮೭

ರಾಗ—ರೇಗುಪ್ತಿ ತಾಳ—ಅಟ

೨ ಆವ ಕುಲವಾದರೇನು ॥ ಪ ॥
ಭಾವದ ವಿಜ್ಞಾನ ತಿಳಿದವನಿಗೆ ಮತ್ತೆ ॥ ಅ ಪ ॥

---

೧ ವ್ರತ-ನೇಮವಿಲ್ಲದೆ ಮಂತ್ರ-ತಂತ್ರಗಳೇಕೆ ? (ಅ ೧೧).
ವಿ. ಸೂ.:— ಅ (೧೦) ಪ್ರತಿಗಳಲ್ಲಿ ಈ ಎರಡು ನುಡಿಗಳು ಹೆಚ್ಚಾಗಿವೆ.

ಅಂಬಲಿಯುಂಬವಗೆ ಅಮೃತಾನ್ನಗಳು ಏಕೆ ? ।
ಕಂಬಳಿಯು ಹೊದೆವಗೆ ದುಕೂಲವೇಕೆ ? ॥
ಡೊಂಬಾಟ ಇಕ್ಕುವಗೆ ಗಂಭೀರತನವೇಕೆ ? ।
ಹಂಬಲಿಸುವವನ ಜೀವನವೇತಕೆ ? ॥ ೧ ॥

ಭೂಸುರರ ಕೊಲ್ಲುವಗೆ ದಾನ ಧರ್ಮಗಳೇಕೆ ? ।
ಭಾಷೆಹೀನರಿಗೆ ನಂಬಿಗೆ ಏತಕೆ ? ॥
ಕ್ಲೇಶ ಒಡಲೊಳಗಿರಲು ತೀರ್ಥಯಾತ್ರೆಗಳೇಕೆ ? ।
ಆಶೆಬಿಡದವನ ಸಂನ್ಯಾಸವೇಕೆ ? ॥ ೨ ॥

೨ ಕ. ವಿ. ವಿ. ತಾಳೆಗರಿ (೧೪೫೩-೧೬೫೪) ಪ್ರತಿಯಿಂದ ತೆಗೆದುಕೊಂಡಿದೆ.
೩ ಪ್ರತಿಯಲ್ಲಿ ವಿಕಾರ ತುಂಬಿದೆ.

ಅಸುಡೊಂಕು ಕಬ್ಬು ಇರಲು—ಅದರೊಳಗಿದ್ದ ।
ರಸ ತಾನು ಡೊಂಕೇನೆಲೊ—ಮರುಳೆ ॥
ವಿಷಯಭಾವನೆ ಬಿಟ್ಟು ನೀ ಹೋಗಿ ಗುರುಗಳ ।
ಹಸನಾಗಿ ಕೇಳು ಕಾಣೊ—ಮನುಜಾ ॥ ೧ ॥

ನಾನಾವರ್ಣದ ಆಕಳ—ಕ್ಷೀರದಲಿ ।
ನಾನಾವರ್ಣಗಳಿಹುದೆ—ಮನುಜಾ ॥
ಹೀನಭಾವನೆಗಳನಿಂಬಿಟ್ಟು ನೀ ಪೋಗಿ ।
ಜ್ಞಾನಿಗಳ ಕೇಳು ಕಾಣೊ—ಮನುಜಾ ॥ ೨ ॥

ಶರಧಿಯೊಳು ತೆರೆನೊರೆಗಳಾ—ಪರಿಯಂತೆ ।
ಶರೀರವಲ್ಲದೆ ಬೇರಿಹುದೆ ? ॥
ವರಪುರಂದರವಿಠಲನ ಸ್ಮರಿಸುತಿರಲು ನಿನಗೆ ।
ಸಿರಿಯಹುದು ಮುಕುತಿಯಹುದು—ಮನುಜಾ ॥ ೩ ॥

೮೭

ರಾಗ—ಸಾರಂಗ ತಾಳ—ಆದಿ

೧ ಹೊಲೆಯ ಹೊಲತಿ ಇವರವರಲ್ಲ ।
ಹೊಲಗೇರಿಯೊಳು ಹೊಲೆಯ ಹೊಲತಿಯಿಲ್ಲ ॥ ಪ ॥

ಸತಿಯಳ ವಶನಾಗಿ ಜನನಿ-ಜನಕರಿಗೆ ।
ಅತಿ ನಿಷ್ಠುರ ನುಡಿವವ ಹೊಲೆಯ ॥
ಸುತರ ಪಡೆದು ವಾರ್ಧಿಕ್ಯ ಮದವೇರಿ ।
ಪತಿದ್ವೇಷ ಮಾಡುವಳೆ ಹೊಲತಿ ॥ ೧ ॥

೧ ಅ (ಬಿಡಿ ೫) ಇ (೬೦) ಪ್ರತಿಗಳಿಂದ ಆರಿಸಿದೆ. ಎ ಪ್ರತಿಯಲ್ಲಿ ವಿಕಾರಗಳಿವೆ.

ಗುರುಗಳಲ್ಲಿ ವಿದ್ಯೆಗಳನು ಕಲಿತು ।
ಹಿರಿಯರ ಬಳಲಿಸುವವ ಹೊಲೆಯ ॥
ಪರಪುರುಷಗೊಲಿದು ತನ್ನ ಪುರುಷನ ।
ವಿರಸವ ಮಾಡುವ ಕುಲಗೇಡಿಯೆ ಹೊಲತಿ ॥ ೨ ॥

ಒಡೆಯನನ್ನವನುಂಡು ಅಡಿಗಡಿಗೆ ಬಾಯ್- ।
ಬಿಡದೆ ತರ್ಕಿಸುವ ಜಡ ಹೊಲೆಯ ॥
ಬಡತನ ಬಂದರೆ ಪುರುಷನ ರಚ್ಚೆಗೆ ।
ಬಿಡದೆ ತಹಳೆ ಶುದ್ಧ ಹೊಲತಿ ॥ ೩ ॥

ನೂರೊಂದು ಕುಲ ಕುಂಭಿಪಾಕಕಟ್ಟುವ ।
ಪರನಾರಿಯಲ್ಲಿ ವೀರ್ಯವಿಟ್ಟವ ಹೊಲೆಯ ॥
ಆರೊಳು ಕಲಹಾಪಸ್ಮಾರಿ ದುರ್ಮುಖಿಯು—ಕ- ।
ಠೋರಕುಮತಿ ಶುದ್ಧ ಹೊಲತಿ ॥ ೪ ॥

ಅಜನುತ ಪುರಂದರವಿಠಲನ ದಾಸರ ।
ಭಜನೆಯ ದಾರಿಯ ಬಿಟ್ಟವ ಹೊಲೆಯ ॥
ನಿಜವರ್ಯರಾದ ಸಜ್ಜನರ ಪದಪದ್ಮವ ।
ಭಜಿಸದಿರುವಳೆ ಶುದ್ಧ ಹೊಲತಿ ॥ ೫ ॥

## ೮೮

ರಾಗ—ಮುಖಾರಿ ತಾಳ—ಮಟ್ಟೆ

೧ ಹೊಲೆಯ ಹೊರಗಹನೆ ಊರೊಳಗಿಲ್ಲವೆ ।
ಸಲೆ ಶಾಸ್ತ್ರವನು ತಿಳಿದು ಬಲ್ಲವರು ನೋಡಿ ॥ ಪ ॥

---

೧ ಕ. ವಿ. ವಿ. ತಾಳೆಗರಿ (೧೮೫೮–೧೭೫೦) ಪ್ರತಿಯಿಂದ ಆರಿಸಿಕೊಂಡಿದೆ.
೨ (II) ಪ್ತು (೧–೦) ತ್ರಿಪ್ರತಿಗಳಲ್ಲಿಯು ಹಾಡಿನಲ್ಲಿ ವಿಕಾರಗಳಿವೆ

ಭಾಳದಲಿ ಭಸಿತ ಭಂಡಾರವಿಡದವ ಹೊಲೆಯ ।
ಕೇಳಿ ಸಲೆಶಾಸ್ತ್ರವನು ತಿಳಿಯದವ ಹೊಲೆಯ ॥
ಆಳಾಗಿ ಅರಸಂಗೆ ಕೈಮುಗಿಯದವ ಹೊಲೆಯ ।
ಸೂಳೆಯರ ಕೂಡುವಾತನೇ ಶುದ್ಧ ಹೊಲೆಯ ॥ ೧ ॥

ಇದ್ದ ಧನ ದಾನ-ಧರ್ಮವ ಮಾಡದವ ಹೊಲೆಯ ।
ಕದ್ದು ತನ್ನೊಡಲ ಹೊರೆವಾತನೇ ಹೊಲೆಯ ॥
ಬದ್ಧವಹ ನಡೆ-ನುಡಿಗಳಿಲ್ಲದಿದ್ದವ ಹೊಲೆಯ ।
ಮದ್ದಿಕ್ಕಿ ಕೊಲುವವನೆ ಮರುಳು ಹೊಲೆಯ ॥ ೨ ॥

ಆಶೆಯನು ತೋರಿ ಭಾಷೆಗೆ ತಪ್ಪುವವ ಹೊಲೆಯ ।
ಲೇಸು ಉಪಕಾರಗಳನರಿಯದವ ಹೊಲೆಯ ॥
ಮೋಸದಲಿ ಪ್ರಾಣಕ್ಕೆ ಮುನಿಯುವವನೇ ಹೊಲೆಯ ।
ಹುಸಿಮಾತನಾಡುವವನೇ ಸಹಜ ಹೊಲೆಯ ॥ ೩ ॥

ಕೊಂಡ ಋಣವನು ತಿರುಗಿ ಕೊಡಲರಿಯದವ ಹೊಲೆಯ ।
ಭಂಡಮಾತುಗಳಾಡುವವನೆ ಹೊಲೆಯ ॥
ಗಂಡ-ಹೆಂಡಿರ ನಡುವೆ ಭೇದಗೈವವ ಹೊಲೆಯ ।
ಹೆಂಡರಿಚ್ಛೆಗೆ ನಡೆವ ಹೇಡಿಹೊಲೆಯ ॥ ೪ ॥

ಪರಧನಕೆ ಪರಸತಿಗೆ ಅಳುಪಿದವನೇ ಹೊಲೆಯ ।
ಗುರು-ಹಿರಿಯರನು ಕಂಡು ಎರಗದಿದ್ದವ ಹೊಲೆಯ ॥
ಅರಿತು ಆಚಾರವನು ಮಾಡದಿದ್ದವ ಹೊಲೆಯ ।
ಪುರಂದರವಿಠಲನನು ನೆನೆಯದವ ಹೊಲೆಯ ॥ ೫ ॥

## (೨) ಮನಸ್ಸು

೮೯

ರಾಗ—ಶಂಕರಾಭರಣ ತಾಳ—ಏಕ

೧ ಮಲವು ತೊಳೆಯಬಲ್ಲುದೆ ।
ಮನವ ತೊಳೆಯದನಕ ॥ ಪ ॥

ಹಲವು ನೀರಿನೊಳಗೆ ಪೊಕ್ಕು ।
ಹಲುಬಿದರಿನ್ನೇನು ಫಲ ? ॥ ಅ ಪ ॥

ಭೋಗಫಲವನುಂಡು ವಿಷಯಭೋಗದಿಂದ ಮತ್ತರಾಗಿ ।
ಭೋಗಬೇಡಿ ಜನರು ಜೀವಕಾಗಿ ಮುನಿವರು ॥
ಯೋಗಿಯಂತೆ ಜನರ ಮೆಚ್ಚಿಗಾಗಿ ಹೋಗಿ ಉದಯದಲ್ಲಿ ।
ಕಾಗೆಯಂತೆ ಮುಳುಗಿದರೆ ಅಮೋಘಫಲವು ಬಾಹೊದೆ? ॥ ೧ ॥

ಪರರ ಕೇಡಬಯಸಿ ಗುರು-ಹಿರಿಯರನ್ನು ನಿಂದಿಸುತ ।
ಪರಮಸೌಖ್ಯದಿಂದ ಪರಸ್ತ್ರೀಯರನ್ನು ಆಳುತ ।
ಪರಮಯೋಗಸಿಷ್ಠೆಯೆಂದು ಧರೆಯ ಮೇಲೆ ಡಂಭತೋರಿ ।
ಹರಿವ ನದಿಯ ತೀರದಲ್ಲಿ ಪರಿಯ ಬಕಧ್ಯಾನದಂಥ ॥ ೨ ॥

ತಂದೆ-ತಾಯಿ ತಿರುತಿನ್ನಲು ಒಂದು ದಿವಸ ಕೇಳಲಿಲ್ಲ ।
ಮಂದಗಮನೆಯರೊಡನೆ ಆನಂದದಿಂದ ನಲಿಯುತ ॥
ತಂದೆಯ ಹೆಸರಿನಿಂದ ನೂರುಮಂದಿಗುಣಿಸಿ ಹರುಷದಿಂದ ।
ತಂದೆ ತೃಪ್ತನಾದನೆಂಬ ಮಂದಮತಿಯ ಜನರುಗಳ ॥ ೩ ॥

ಕಾಸಪೀಸಕ್ಕಾಗಿ ಹರಿಯದಾಸನೆಂದು ತಿರುಗಿ ತಿರುಗಿ ।
ದೇಶದಿಂದ ದೇಶಕೆಳೆದು ಕಾಶಿಯಾತ್ರೆ ಮಾಡಲು ॥

೧ ಆ (ಬಿವಿ ೫) ಪ್ರತಿಯಿಂದ ಆರಿಸಿದೆ.
೨ ಓ ಪ್ರತಿಗಳಲ್ಲಿ ಸಿಕಾರ ಹೇಳಲಾಗದಷ್ಟಿದೆ.

ಆಶಾಪಾಶ ಬಿಡದ ಮನದ ಕೂಸಿನಂತೆ ಕಾಡುತಿಪ್ಪ ।
ವೇಷಧಾರಿಗಳಿಗೆ ಆ ಕಾಶಿಯ ಫಲ ಬಾಹೊದೆ? ॥ ೪ ॥

ಏನು ಮಾಡಲೇನು ಫಲ—ಏನು ನೋಡಲೇನು ಫಲ—।
ಜ್ಞಾನವಿಲ್ಲದಚ್ಯುತನ ಧ್ಯಾನವಿಲ್ಲದವರಿಗೆ ॥
ಮೌನ-ನೇಮ-ನಿಷ್ಠೆ ಪರಾಧೀನವೆಂಬುದ ತಿಳಿದುಕೊಂಡು ।
ದೀನನಾಥ ಪುರಂದರವಿಠಲನ ನಿಲುಕಲೊಲ್ಲದೆ ॥ ೫ ॥

## ೬೦

ರಾಗ—ಮಧ್ಯಮಾವತಿ ತಾಳ—ಅಟ

೧ ತನುವ ನೀರೊಳಗದ್ದಿ ಫಲವೇನು ।
ಮನದಲ್ಲಿ ದೃಢಭಕುತಿ ಇಲ್ಲದ ಮನುಜನು ॥ ಪ ॥

ದಾನ-ಧರ್ಮಗಳನು ಮಾಡುವುದೆ ಸ್ನಾನ ।
ಜ್ಞಾನ-ತತ್ತ್ವಂಗಳ ತಿಳಿಯುವುದೆ ಸ್ನಾನ ॥
ಹೀನಪಾಪಂಗಳ ಬಿಡುವುದೆ ಸ್ನಾನ ।
ಧ್ಯಾನದಿ ಮಾಧವನ ನಂಬುವುದೆ ಸ್ನಾನ ॥ ೧ ॥

ಗುರುಗಳ ಶ್ರೀಪಾದತೀರ್ಥವೆ ಸ್ನಾನ ।
ಹಿರಿಯರ ದರುಶನ ಮಾಡುವುದೆ ಸ್ನಾನ ॥
ಕರೆದು ಅನ್ನವನು ಇಕ್ಕುವುದೊಂದು ಸ್ನಾನ ।
ಸಿರಿಹರಿಚರಣ ನಂಬುವುದೊಂದು ಸ್ನಾನ ॥ ೨ ॥

ದುಷ್ಟರಸಂಗವ ಬಿಡುವುದೊಂದು ಸ್ನಾನ ।
ಕಷ್ಟಪಾಪಂಗಳನು ಹರಿವುದೆ ಸ್ನಾನ ॥
ಸೃಷ್ಟಿಯೊಳಗೆ ಸಿರಿಪುರಂದರವಿಠಲನ ।
ಮುಟ್ಟಿ ಭಜಿಸಿ ಪುಣ್ಯಪಡೆವುದೆ ಸ್ನಾನ ॥ ೩ ॥

೧ ಆ (I) ಝು (೨) ಜ್ಞ ಶ್ರೀಪ್ರತಿಗಳಿಂದ ಆರಿಸಿದೆ.

## ೯೧

ರಾಗ—ನಾದನಾಮಕ್ರಿಯ ತಾಳ—ಆದಿ

೧ ಹರಿದಾಡುವಂಥ ಮನವ ನಿಲಿಸುವುದು ಬಹುಕಷ್ಟ ||ಪ||

ಕಾಶಿಗೆ ಹೋಗಲುಬಹುದು |
ದೇಶ ತಿರುಗಲುಬಹುದು |
ಆಶೆ ಸುಟ್ಟು ತಾನಿರಬಹುದು || ೧ ||

ಜಪವ ಮಾಡಲುಬಹುದು |
ತಪವ ಮಾಡಲುಬಹುದು |
ಉಪವಾಸದಲ್ಲಿ ತಾನಿರಬಹುದು || ೨ ||

ಸ್ನಾನ ಮಾಡಲುಬಹುದು |
ದಾನ ಮಾಡಲುಬಹುದು |
ಧ್ಯಾನದಿ ಪುರಂದರವಿಠಲನ ಚರಣದಿ || ೩ ||

## ೯೨

ರಾಗ—ಹಂಸಧ್ವನಿ ತಾಳ—ರೂಪಕ

೨ ಹುಚ್ಚುಕುನ್ನಿ ಮನವೆ—ನೀ- |
ಹುಚ್ಚುಗೊಂಬುದು ಘನವೆ || ಪ ||

ಕಚ್ಚುಕದನತನವ ಬಿಟ್ಟು |
ಅಚ್ಯುತನ ಪದವ ಮುಟ್ಟು || ಅ ಪ ||

ಸ್ನಾನ ಮಾಡಿದರೇನು—ಸಂ- |
ಧ್ಯಾನವ ಮಾಡಿದರೇನು ||

೧ ಅ (ಅ) ಪ್ರತಿಯಲ್ಲಿ ಮಾತ್ರ ಕಾಣುತ್ತದೆ.

೨ ಕ. ವಿ. ವಿ. ತಾಳೆಗರಿ ([illegible]) ಪ್ರತಿಯಿಂದ ತೆಗೆದುಕೊಂಡಿದೆ.

ಹೀನತನವ ಬಿಡಲಿಲ್ಲ ।
ಸ್ವಾನುಭಾವ ಕೂಡಲಿಲ್ಲ ॥ ೧ ॥

ಜಪವ ಮಾಡಿದರೇನು—ನೀ- ।
ತಪವ ಮಾಡಿದರೇನು ॥
ಕಪಟ ಕಲ್ಮಷ ಕಳೆಯಲಿಲ್ಲ ।
ಕಾಮಿತಾರ್ಥ ಪಡೆಯಲಿಲ್ಲ ॥ ೨ ॥

ಮೂಗು ಹಿಡಿದರೇನು—ನೀ- ।
ಮುಸುಕನಿಕ್ಕಿದರೇನು ॥
ಭೋಗಿಶಯನನ ವರ್ಣಿಸಲಿಲ್ಲ ।
ದೇವಪೂಜೆ ಮಾಡಲಿಲ್ಲ ॥ ೩ ॥

ಗರುವನಾದರೇನು—ನೀ- ।
ಗೊರವನಾದರೇನು ॥
ಗುರುವಿನ ಸ್ವಾಮ್ಯವ ತಿಳಿಯಲಿಲ್ಲ ।
ಗುರುವುಪದೇಶ ಪಡೆಯಲಿಲ್ಲ ॥ ೪ ॥

ಹೋಮ ಮಾಡಿದರೇನು—ನೀ- ।
ನೇಮವ ಮಾಡಿದರೇನು ॥
ರಾಮನಾಮ ಸ್ಮರಿಸಲಿಲ್ಲ ।
ಮುಕುತಿಪಥವ ಪಡೆಯಲಿಲ್ಲ ॥ ೫ ॥

ನವದ್ವಾರವ ಕಟ್ಟು—ನೀ- ।
ನಡುವಣ ಹಾದಿಯ ಮುಟ್ಟು ॥
ಅವಗುಣಗಳ ಬಿಟ್ಟು—ಭಾನು- ।
ಮಂಡಲ ಮನೆಯ ಮುಟ್ಟು ॥ ೬ ॥

ಏನ ನೋಡಿದರೇನು—ನೀ- ।
ನೇನ ಮಾಡಿದರೇನು ॥



ಮನ್ನಾರು ಕೃಷ್ಣ

ಧ್ಯಾನವನ್ನು ಮಾಡಲಿಲ್ಲ ।
ಪುರಂದರವಿಠಲನ ಸ್ಮರಿಸಲಿಲ್ಲ ॥ ೭ ॥

೯೩

ರಾಗ—ಆನಂದಭೈರವಿ ತಾಳ—ಅಟ

೧ ಎಚ್ಚರದಲಿ ನಡೆ ಮನವೆ—ನಡೆಮನವೆ—ಮುದ್ದು- ।
ಅಚ್ಯುತನ ದಾಸರ ಒಡಗೂಡಿ ಬರುವೆ ॥ ಪ ॥

ಧರ್ಮವ ಮಾಡುವುದಿಲ್ಲಿ—ಇನ್ನು- ।
ಬ್ರಹ್ಮನ ಸಭೆಯ ತೋರುವರು ಮುಂದಲ್ಲಿ ॥
ಕರ್ಮಯೋಜನೆಗಳು ಇಲ್ಲಿ—ಬೆನ್ನ ।
ಚರ್ಮವ ಸುಲಿಸಿ ತಿನ್ನಿಸುವರು ಅಲ್ಲಿ ॥ ೧ ॥

ಅನ್ನದಾನವ ಮಾಳ್ಪುದಿಲ್ಲಿ—ಪೃ- ।
ಷ್ಠಾನ್ನವ ತಂದು ಮುಂದಿಡುವರು ಅಲ್ಲಿ ॥
ಅನ್ಯಾಯ ನುಡಿಯುವುದಿಲ್ಲಿ—ಛಿನ್ನ- ।
ಭಿನ್ನವ ಮಾಡಿ ತಿನ್ನಿಸುವರು ಅಲ್ಲಿ ॥ ೨ ॥

ಮೋಸವ ಮಾಡುವುದಿಲ್ಲಿ—ಸೀಸ- ।
ಕಾಸಿ ಬಾಯೊಳಗೆ ಹೊಯ್ಯುವರಲ್ಲಿ ॥
ದಾಸರ ಪೂಜಿಪುದಿಲ್ಲಿ—ಉ- ।
ರ್ವೀಶಾಧಿಪತಿ ಬಂದನೆಂಬರು ಅಲ್ಲಿ ॥ ೩ ॥

ವಂಚನೆ ಮಾಡುವುದಿಲ್ಲಿ—ಕಾದ- ।
ಹಂಚಿನ ಪುಡಿಯ ತಿನ್ನಿಸುವರು ಅಲ್ಲಿ ॥

---

೧ ಇದು (೬) ಪ್ರತಿಯಿಂದ ತೆಗೆದುಕೊಂಡಿದೆ. ೬ ಪ್ರತಿಯಲ್ಲಿ ಒಂಬತ್ತು ನುಡಿಗಳಿವೆ. (೩-೪ ನುಡಿಗಳಿಲ್ಲ).

ಪಂಚಾಮೃತದ ಪೂಜೆ ಇಲ್ಲಿ—ನಿನಗೆ- ।
ಕಂಚು-ಕಾಳಾಂಜಿಯು ಪಿಡಿದಿಹರಲ್ಲಿ ॥ ೪ ॥

ಚಾಡಿಯ ನುಡಿವುದು ಇಲ್ಲಿ—ಅದ- ।
ನಾಡಿದ ನಾಲಗೆ ಸೀಳುವರಲ್ಲಿ ॥
ಬೇಡಬಂದರೆ ಬಯ್ವುದಿಲ್ಲಿ—ನಿನ್ನ- ।
ಓಡಾಡುವ ಕಾಲು ಕತ್ತರಿಪರಲ್ಲಿ ॥ ೫ ॥

ಮದ್ದಿಕ್ಕಿ ಕೊಲ್ಲುವುದಿಲ್ಲಿ—ಒದ್ದು- ।
ಹದ್ದು-ಕಾಗೆಗಳಿಗೆ ಈಯುವರಲ್ಲಿ ॥
ಕ್ಷುದ್ರ ಬುದ್ಧಿಯ ನಡೆವುದಿಲ್ಲಿ—ದೊಡ್ಡ- ।
ಗುದ್ದಲಿ ಬೆನ್ನೊಳು ಎಳೆಯುವರಲ್ಲಿ ॥ ೬ ॥

ಕೊಟ್ಟ ಭಾಷೆಗೆ ತಪ್ಪುವುದಿಲ್ಲಿ—ಕೈಯ- ।
ಕಟ್ಟಿ ಈಟಿಯಿಂದ ಇರಿಯುವರಲ್ಲಿ ॥
ಕೊಟ್ಟ ಧರ್ಮವ ನಡೆಸುವುದಿಲ್ಲಿ—ಬಲು- ।
ಶ್ರೇಷ್ಠ ನೀನೆಂದು ಕೊಂಡಾಡುವರಲ್ಲಿ ॥ ೭ ॥

ಆಲಯದಾನವು ಇಲ್ಲಿ—ವಿ- ।
ಶಾಲ ವೈಕುಂಠದ ಮಂದಿರವಲ್ಲಿ ॥
ಆಲಯ ಮುರಿಯುವುದಿಲ್ಲಿ—ನಿನ್ನ- ।
ಶೂಲದ ಮೇಲೇರಿಸಿ ಕೊಲುವರಲ್ಲಿ ॥ ೮ ॥

ತಂದೆಮಾತನು ಮೀರುವುದಿಲ್ಲಿ—ಹುಲ್ಲು- ।
ದೊಂದೆಯ ಕಟ್ಟಿ ಸುಡಿಸುವರಲ್ಲಿ ॥
ತಂದೆ-ತಾಯ್ಗಳ ಪೂಜೆ ಇಲ್ಲಿ—ದೇ- ।
ವೇಂದ್ರನ ಸಭೆಯು ತೋರುವರು ಮುಂದಲ್ಲಿ ॥ ೯ ॥

ಗಂಡನ ಬೆಯ್ಯುವುದಿಲ್ಲಿ—ಬೆಂಕೆ- ।
ಕೆಂಡವ ತಂದು ಬಾಯಲಿ ತುಂಬುವರಲ್ಲಿ ॥

ಕೊಂಡೆಯ ನಡೆಸುವುದಿಲ್ಲಿ—ಬೆಂಕೆ- ।
ಕುಂಡವ ತಂದು ತಲೆಯಲಿಡುವರಲ್ಲಿ ॥ ೧೦ ॥

ಹೊನ್ನು-ಹೆಣ್ಣನು ಬಯಸುವುದಿಲ್ಲಿ—ನಿನ್ನ- ।
ಕಣ್ಣಿಗೆ ಸುಣ್ಣವ ತುಂಬುವರಲ್ಲಿ ॥
ಕನ್ಯಾದಾನವ ಮಾಳ್ಪುದಿಲ್ಲಿ—ನಮ್ಮ- ।
ಚೆನ್ನಪುರಂದರವಿಠಲನೊಲಿವನು ಅಲ್ಲಿ ॥ ೧೧ ॥

## ೯೪

ರಾಗ—ಯದುಕಲಕಾಂಬೋದಿ ತಾಳ—ಅಟ

೧ ಎಚ್ಚರಿಕೆ ಎಚ್ಚರಿಕೆ ಮನವೆ—ನಮ್ಮ- ।
ಅಚ್ಯುತನ ಪಾದಾರವಿಂದ ಧ್ಯಾನದಲಿ ॥ ಪ ॥

ಆಶಾಪಾಶದೊಳಗೆ ಸಿಲುಕಿ—ಬಹು- ।
ಕ್ಲೇಶಪಟ್ಟು ತುಚ್ಛ ಸುಖದ ಮರುಳಿಕ್ಕಿ ॥
ಹೇಸಿ ಸಂಸಾರದಲಿ ಸಿಲ್ಕಿ—ಮಾಯಾ- ।
ಕ್ಲೇಶ ಅಂಬರಕೇಳಿಗೆ ಮೈಮರೆತು ಸೊಕ್ಕಿ ॥ ೧ ॥

ಹಣ-ಹೆಣ್ಣು-ಮಣ್ಣಾಸೆ ವ್ಯರ್ಥ— ಈ- ।
ತನುವಿಗೆ ಯಮಪುರ ಪಯಣವೆ ನಿತ್ಯ ॥
ಮಿಣುಕುಶೃಂಗಾರಗಳು ಮಿಥ್ಯ—ಅಂತ- ।
ಕನ ಯಾತನೆಗಳಿಗೆ ಹರಿನಾಮ ಪಥ್ಯ ॥ ೨ ॥

ತೊಗಲುಚೀಲ ಒಂಬತ್ತು ಹರಕು—ನರ- ।
ಬಿಗಿದು ಕಟ್ಟಿ ಒಳಗೆ ಎಲುವುಗಳ ಸಿಲುಕು ॥

೧ ಗ (B) ಪ್ರತಿಯಿಂದ ತೆಗೆದುಕೊಂಡಿದೆ.

ಬಗೆ ರಕ್ತ-ಮಾಂಸದ ಹುಳುಕು—ಒ- ।
ಳಗೆ ಮಲ-ಕಫ-ವಾತ-ಪಿತ್ತದ ಸರಕು ॥ ೩ ॥

ದುಷ್ಟರ ಸಹವಾಸ ಹೀನ—ಬಲು- ।
ಇಷ್ಟ ಜನಸಂಗವು ಪರಕೆ ಬಹುಮಾನ ॥
ಎಷ್ಟು ಓದಿದರಷ್ಟು ಜ್ಞಾನ—ಆದರ- ।
ಲ್ಲಿಟ್ಟು ಭಕುತಿಯ ತಿಳಿಯೆಲೊ ಸಾವಧಾನ ॥ ೪ ॥

ನಾಲಗೆಯ ಹರಿಬಿಡಬೇಡ—ತಿಂಡಿ- ।
ವಾಳರ ರುಚಿಪಾಕಗಳನೆಣಿಸಬೇಡ ॥
ಹಾಳುಮಾತುಗಳಾಡಬೇಡ—ಶ್ರೀ- ।
ಲೋಲ ಪುರಂದರವಿಠಲನ ಬಿಡಬೇಡ ॥ ೫ ॥

[illegible]

ರಾಗ—ರೇಗುಪ್ತಿ ತಾಳ—ಅಟ

೧ ಛೀ ಛೀ ಛೀ ಛೀ ಕಂಡೆಯ ಮನವೆ—ಇಂಥ- ।
ನೀಚವೃತ್ತಿಗಳನು ಬಿಡು ಕಂಡೆಯ ಮನವೆ ॥ ಪ ॥

ಕಿವಿಗೊಟ್ಟು ಮಧುರನಾದಕೆ ಹುಲ್ಲೆಯು ।
ರವದ ಬಲೆಗೆ ಸಿಕ್ಕಿಬಿಪ್ಪುದನರಿಯ ॥
ನವಮೋಹನಾಂಗಿಯರ ಕೋಕಿಲಾಲಾಪದ ।
ಸವಿ ಕೇಳದಚ್ಯುತನ ಕಥೆ ಕೇಳು ಮನವೆ ॥ ೧ ॥

ನಲಿಪೆದ್ದು ಕರಿ ಎಳೆಯ ತೃಣಸ್ಪರುಶನಕಾಗಿ ।
ಕುಳಿಗೆ ಬಿದ್ದಿರುವುದ ಕಂಡು ಕಂಡರಿಯ ॥
ನಳಿನಾಕ್ಷಿಯರಂಗಸಂಗವ ಮೆಚ್ಚಿ ಕೆಡದೆ ಶ್ರೀ- ।
ಲಲನೇಶನಂಘ್ರಿಯನಪ್ಪಿಕೋ ಮನವೆ ॥ ೨ ॥

೧ ಝು (೫–೧೦) ಒಂದೇ ಪ್ರತಿಯಲ್ಲಿ ಸಿಕ್ಕುತ್ತಿದೆ.

ಗಾಣದ ತುದಿಯ ಮಾಂಸವ ಮೆಲುವ ಮತ್ಸ್ಯವು ।
ಪ್ರಾಣವ ಬಿಡುವುದ ಕಂಡು ಕಂಡರಿಯ? ॥
ಮಾನಿನಿಯ ಬಯಸದೆ ಶ್ರೀನಾರಾಯಣನ ।
ಧ್ಯಾನಾಮೃತವನು ಸವಿದುಣ್ಣೋ ಮನವೆ ॥ ೩ ॥

ಪಣ್ಣೆಂದು ಭ್ರಮಿಸಿ ಪತಂಗ ದೀಪದಿ ಬಿದ್ದು ।
ಕಣ್ಣುಗೆಡುವುದನು ಕಂಡು ಕಂಡರಿಯ ?॥
ಬಣ್ಣದ ಬಾಲೆಯರ ರೂಪಕೆ ಮರುಳಾಗಿ ।
ಮಣ್ಣು ತಿನ್ನದೆ ಮಾರನಯ್ಯನ ನೆನೆ ಮನವೆ ॥ ೪ ॥

ಅಳಿ ಪರಿಮಳಕಾಗಿ ಕಮಲದೊಳಗೆ ಸಿಲುಕಿ ।
ಅಳಿದುಹೋಹುದನು ಕಂಡು ಕಂಡರಿಯ? ॥
ಬಳಲದೆ ವರಪುರಂದರವಿಠಲನಂಘ್ರಿಯ ।
ತುಳಸಿನಿರ್ಮಾಲ್ಯವಾಘ್ರಾಣಿಸು ಮನವೆ ॥ ೫ ॥

## ೯೬

ರಾಗ—ಪೂರ್ವಿ ತಾಳ—ಅಟ

೧ ಮೆರೆಯದಿರೆಲೆ ಮನವಿಲ್ಲಿ—ಯಮ- ।
ಪುರಿಗೆ ಒಯ್ದು ಬಾಧಿಸುತಿಹರಲ್ಲಿ ॥ ಪ ॥

ಪರನಾರಿಯರ ಸಂಗವಿಲ್ಲಿ—ಉಕ್ಕು ।
ಎರೆದ ಸತಿಯರ ತಕ್ಕೈಸುವರಲ್ಲಿ ॥
ಗುರು-ಹಿರಿಯರ ನಿಂದೆಯಿಲ್ಲಿ—ಬಾಯೊ- ।
ಳಿರಿದು ಸೀಸವ ಕಾಸಿ ಹೊಯಿಸುವರಲ್ಲಿ ॥ ೧ ॥

ಉಂಡ ಮನೆಯ ಕೇಡು ಬಗೆದಿಲ್ಲಿ—ಎದೆ- ।
ಗುಂಡಿಗೆಯನು ಸೀಳಿ ಕೊಲುತಿಹರಲ್ಲಿ ।

೧ ಎ ಓ ಪ್ರತಿಗಳಿಂದ ತೆಗೆದುಕೊಂಡಿದೆ.

ಗಂಡನ ದಣಿಸುವುದಿಲ್ಲಿ—ಯಮ- ।
ಕುಂಡದೊಳಗೆ ಹಾಕಿ ಕುದಿಸುವರಲ್ಲಿ ॥ ೨ ॥

ಚಾಡಿಯ ಹೇಳುವುದಿಲ್ಲಿ—ನುಡಿ- ।
ದಾಡುವ ನಾಲಗೆ ಕೀಳುವರಲ್ಲಿ ॥
ಬೇಡಿದರಿಗೆ ಧರ್ಮವಿಲ್ಲಿ—ಇದ- ।
ನೀಡದಿರಲು ಒದ್ದು ನೂಕುವರಲ್ಲಿ ॥ ೩ ॥

ಪುಸಿ-ಠಕ್ಕು-ಠವುಳಿಗಳಿಲ್ಲಿ—ಕಟ್ಟಿ- ।
ಎಸೆದು ಕೊಲ್ಲುವರೊ ನಿನ್ನವರು ಕೇಳಲ್ಲಿ ॥
ಅಶನಪ್ರಭೇದಗಳಿಲ್ಲಿ—ಮಾಡೆ- ।
ಬಿಸಿಯ ಕೆಂಡವ ತಂದು ತಿನಿಸುವರಲ್ಲಿ ॥ ೪ ॥

ಸಿರಿಮದದೊಳಗಿಹುದಿಲ್ಲಿ—ಸೊಕ್ಕು- ।
ಮುರಿದು ಹಲ್ಲುಗಳ ಕಳಚುವರಲ್ಲಿ ॥
ಪುರಂದರವಿಠಲನ ಇಲ್ಲಿ—ನೆನೆಯೆ ।
ಸ್ಥಿರವಾದ ಮುಕುತಿ ಪಡಕೊಂಬುವರಲ್ಲಿ ॥ ೫ ॥

## ೩ ಭಾಗ್ಯ

### ೪೭

ರಾಗ—ಸೌರಾಷ್ಟ್ರ ತಾಳ—ಅಟ

೧ ನೆಚ್ಚದಿರೀ ಭಾಗ್ಯ ಆರಿಗೂ ಸ್ಥಿರವಲ್ಲ ।
ನೆಚ್ಚದಿರೆಚ್ಚರಿಕೆ ॥
ಹೆಚ್ಚಿದೆ ಹಿಗ್ಗದೆ ಇದ್ದರೆ ಲೋಕಕೆ ।
ಮೆಚ್ಚು ಕೇಳೆಚ್ಚರಿಕೆ ॥ ಪ ॥

೧ ಕ. ವಿ. ವಿ. ತಾಳೆಗರಿ (೮೫೪—೧೫೦) ಪ್ರತಿಯಿಂದ ತೆಗೆದುಕೊಂಡಿದೆ.
ಅ (ಬಿಡಿ ೪) ಪ್ರತಿಯಲ್ಲಿ ವಿಕಾರಗಳು ಬಹಳಿವೆ.

ಪೊಡವಿಪರೊಲುವೆ ಸುಸ್ಥಿರವೆಂದು ಗರ್ವದಿ |
ನಡೆಯದಿರೆಚ್ಚರಿಕೆ ||
ಕೊಡವನಂಥಕ ಪೊತ್ತು ನಡೆವಂತೆ ಅಧಿಕಾರ |
ಕಡೆಹೊಲ್ಲ ಎಚ್ಚರಿಕೆ ||
ಕಡುಚಪಲನು ತಾನೆಂದು ಪರರವ- |
ಗಡಿಸದಿರೆಚ್ಚರಿಕೆ ||
ಬಡವರೆಡರ ಲಾಲಿಸದೆ ಮುಂದಕೆ ಹೆಜ್ಜೆ |
ಇಡಬೇಡವೆಚ್ಚರಿಕೆ || ೧ ||

ದೊರೆಗಳ ಒಲುಮೆಯುಂಟೆಂದೆಲ್ಲರೊಳು ಹಗೆ |
ತರವಲ್ಲ ಎಚ್ಚರಿಕೆ ||
ಉರಗನ ಮುತ್ತಿ ಕಟ್ಟಿರುವೆಯು ಕೊರೆದಂಥ |
ತೆರನಪ್ಪುದೆಚ್ಚರಿಕೆ ||
ಗುರು-ಹಿರಿಯರ ಕಂಡು ಚರಣಕೆ ಶಿರಬಾಗಿ |
ನಡೆಯುತಿರೆಚ್ಚರಿಕೆ |
ಸಿರಿಯೆಂಬ ಸೊಡರಿಗೆ ಮಾನ್ಯರ ಅವಮಾನ |
ಬಿರುಗಾಳಿ ಎಚ್ಚರಿಕೆ || ೨ ||

ಲೋಕಾಪವಾದಕೆ ಅಂಜಿ ನಡೆಯುವುದು ವಿ- |
ವೇಕ ಕೇಳೆಚ್ಚರಿಕೆ ||
ನಾಕೇಂದ್ರನಾದರೂ ಬಿಡದಪಕೀರ್ತಿ ಪ- |
ರಾಕು ಕೇಳೆಚ್ಚರಿಕೆ ||
ಕಾಕುಮನುಜರ ಕೊಂಡೆಯ ಕೇಳಿ ಕೋಪದು- |
ದ್ರೇಕ ಬೇಡೆಚ್ಚರಿಕೆ ||
ಭೂಕಾಂತೆ ನಡು ನಡುಗುವಳು ನಿಷ್ಠುರವಾದ |
ವಾಕು ಕೇಳೆಚ್ಚರಿಕೆ || ೩ ||

ನಳ-ಮಾಂಧಾತರೆಂಬವರೇನಾದರು ।
ತಿಳಿದು ನೋಡೆಚ್ಚರಿಕೆ ॥
ಅಳಿವುದು ಈ ದೇಹ ಉಳಿವುದೊಂದೇ ಕೀರ್ತಿ ।
ಇಳೆಯೊಳಗೆಚ್ಚರಿಕೆ ॥
ಅಳಲಿಸಿ ಪರರನು ಗಳಿಸಿದಂಥ ಹೊನ್ನು ।
ಉಳಿಯದು ಎಚ್ಚರಿಕೆ ।
ಉಳಿದಲ್ಪಕಾಲದಿ ಬಡವರಾದವರನು ।
ಹಳಿಯದಿರೆಚ್ಚರಿಕೆ ॥ ೪ ॥

ಪರಸತಿ-ಪರಧನಕಳುಪಲು ಸಿರಿಪೋಗ- ।
ದಿರುಹುವಳೆಚ್ಚರಿಕೆ ॥
ನೆರೆ ಛಿದ್ರಕುಂಭದ ನೀರಿನಂತಾಯುಷ್ಯ ।
ಸರಿಯುವುದೆಚ್ಚರಿಕೆ ॥
ಬರುವ ಹಾನಿವೃದ್ಧಿ ತನ್ನ ಕಾಲವ ವಿಚಾರ-
ಲರಿಯದು ಎಚ್ಚರಿಕೆ ॥
ವರದ ಪುರಂದರವಿಟ್ಠಲರಾಯನ ।
ಮರೆಯದಿರೆಚ್ಚರಿಕೆ ॥ ೫ ॥

## ೯೮

ರಾಗ—ಭೈರವಿ ತಾಳ—ಅಟ

೧ ನೆಚ್ಚಬೇಡ ಭಾಗ್ಯವನು ಹುಚ್ಚುಗೊಂಡ ಮನುಜಾ ।
ಪೆಚ್ಚವಾಗಿ ಹೋಗುವುದು ಏಸೊಂದು ಬಗೆಯಲಿ ॥ ಪ ॥
ಮುತ್ತು-ಮಾಣಿಕ-ನವರತ್ನದ ಗದ್ದುಗೆಯು ।
ಎತ್ತನೋಡಲು ಸಿರಿ ಕೋ ಎನುತಲಿ ॥

೧ ಅ (೧೧) ಅ(II) ಪ್ರತಿಗಳಿಂದ ಆರಿಸಿದೆ.

ಸತ್ಯ ಹರಿಶ್ಚಂದ್ರ ಮತ್ತೆ ಸುಡುಗಾಡಿನಲ್ಲಿ ।
ಎತ್ತುವ ಹಣೆಯಕ್ಕಿ ಹಾಗದ ಕಾಸ || ೧ ||

ದೇವತೆಗಳ ಕೈಯ ಸೇವೆಯ ಕೊಳುತಿರ್ದ ।
ರಾವಣನ ಬದುಕು ಮತ್ತೇನಾಯಿತು ? ||
ಜೀವದ ಪರಿಯರಿತು ನಾವು ದೊರೆಯೆಂಬುವುದೆ ?।
ಸಾವಿನ ಮನೆಹೊಕ್ಕು ಸಾಹಸಪಡಲೇಕೆ || ೨ ||

ಹದಿನೆಂಟುಕೋಟಿ ಧನ ಉದಯಕೆ ಬರುತಿರಲು ।
ಒದಗಿತೆ ಆ ರಾಶಿ ದಿನ ಕರ್ಣಗೆ ? ||
ತುದಿಮಧ್ಯಾಹ್ನಕೆ ದರಿದ್ರನೆನಿಸುವ ।
ಇದರಿಂದ ಕಡೆಗಂಡರಾರು ಜಗದೊಳಗೆ ? || ೩ ||

ಬೆಳ್ಳಿಯ ಗಿಣಿಲು ಬಂಗಾರದ ಹರಿವಾಣ ।
ಕುಳಿತಲ್ಲಿ ಕನಕದ ರಾಶಿಗಳು ||
ಗಳಿಗೆಗೆ ಈ ಭಾಗ್ಯ ಕಾಳಬೆಳುದಿಂಗಳು ।
ಉಳಿವುದ ನಾ ಕಾಣೆ ಚಪಲಲಕ್ಷ್ಮಿಯೆನಲು || ೪ ||

ಇಂತು ಈ ಪರಿಯಲನಂತರು ಹೋದರು ।
ಎಂತು ಪೇಳಲಿ ಅವರ ಪೆಸರುಗಳ ? ||
ಚಿಂತಾಯುತ ಶ್ರೀಪುರಂದರವಿಠಲನ ।
ಸಂತತ ಪಾದಕಮಲವ ಭಜಿಸೊ ಮನುಜಾ || ೫ ||

೯೯

ರಾಗ— ಪೂರ್ವಿ ತಾಳ— ಅಟ

೧ ರೊಕ್ಕ ಎರಡಕ್ಕೆ ದುಃಖ ।
೨ ಗಕ್ಕನೆ ಹೋದರೆ ಘಾತ ಕಾಣಕ್ಕ || ಪ ||

೧ ಅ (I) ಇ (೧೦) ಮು (೧–೧೦) ಜ್ಞ ಕ (೨) ಕೋ॰ ಪುಸ್ತಕಗಳಿಂದ ಆರಿಸಿದೆ.
೨ ರೊಕ್ಕವಿರಲು ಬಹಳಕ್ಕರವಕ್ಕ (ಮು ೧–೧೦).

ಚಿಕ್ಕತನಕೆ ತಂದು ಕೆಡಿಸುವುದು ರೊಕ್ಕ ।
ಮಕ್ಕಳ-ಮರಿಗಳ ಮಾಳ್ಪುದು ರೊಕ್ಕ ॥
ಸಕ್ಕರೆ-ತುಪ್ಪವ ಸಲಿಸುವುದು ರೊಕ್ಕ ।
ಕಕ್ಕುಲಾತಿಗೆ ತಂದು ಕೆಡಿಸುವುದು ರೊಕ್ಕ ॥ ೧ ॥

ಕುಂಟರ-ಕುರುಡರ ಕುಣಿಸುವುದು ರೊಕ್ಕ ।
ಗಂಟುಮಾಡಲಿಕ್ಕೆ ಕಲಿಸುವುದು ರೊಕ್ಕ ॥
ಬಂಟರನೆಲ್ಲ ವಶಮಾಡುವುದು ರೊಕ್ಕ ।
ತುಂಟತನಕೆ ತಂದು ನಿಲಿಸುವುದು ರೊಕ್ಕ ॥ ೨ ॥

ಇಲ್ಲದ ಗುಣಗಳ ಕಲಿಸುವುದು ರೊಕ್ಕ ।
ಸಲ್ಲದ ನಾಣ್ಯವ ಸಲಿಸುವುದು ರೊಕ್ಕ ॥
ಬೆಲ್ಲದಕಿಂತಲೂ ಸವಿಯಾದ ರೊಕ್ಕ ।
ಕೊಲ್ಲಲಿಕ್ಕೆ ಕಾರಣವಾಯಿತು ರೊಕ್ಕ ॥ ೩ ॥

ಉಂಟಾದ ಗುಣಗಳ ಬಿಡಿಸುವುದು ರೊಕ್ಕ ।
ನಂಟರ-ಇಷ್ಟರ ಮಾಡುವುದು ರೊಕ್ಕ ॥
ಒಂಟೆ-ಆನೆ-ಕುದುರೆ ತರಿಸುವುದು ರೊಕ್ಕ ।
ಕಂಟಕಗಳನೆಲ್ಲ ಬಿಡಿಸುವುದು ರೊಕ್ಕ ॥ ೪ ॥

ವಿದ್ವಜ್ಜನರ ವಶಮಾಡುವುದು ರೊಕ್ಕ ।
ಹೊದ್ದಿದವರನು ಹೊರೆವುದು ರೊಕ್ಕ ॥
ಮುದ್ದು ಪುರಂದರವಿಠಲನ ಮರಸುವ ।
ಬಿದ್ದುಹೋಗುವ ರೊಕ್ಕ ಸುಡು ನೀನಕ್ಕ ॥ ೫ ॥

## ೧೦೦

ರಾಗ—ಮುಖಾರಿ ತಾಳ—ಝಂಪೆ

೧ ಆರು ಹಿತವರು ಮನವೆ ಮೂರುಮಂದಿಗಳೊಳಗೆ ।
ನಾರಿಯೋ ಧಾರಿಣಿಯೊ ಧನದ ಬಲು ಸಿರಿಯೊ? ॥ಪ॥

ಅನ್ಯರಲಿ ಜನಿಸಿರ್ದ ಅಂಗನೆಯ ಕರೆತಂದು ।
ತನ್ನ ಮನೆಯಲ್ಲಿ ರಂಜವಾಸಿಯೆನಿಸಿ ॥
ಭಿನ್ನವಿಲ್ಲದೆ ಅರ್ಧ ದೇಹವೆನಿಸುವ ಸತಿಯು ।
ಕಣ್ಣಿನಲಿ ನೋಡಲಂಜುವಳು ಕಾಲನೊಯ್ವಾಗ ॥ ೧ ॥

ಮುನ್ನ ಶತಕೋಟಿ ರಾಯರುಗಳಾಳಿದ ನೆಲನ ।
ತನ್ನದೆಂದು ಶಿಲೆಯ ಶಾಸನವ ಬರೆಸಿ ॥
ಬಿನ್ನಣದಿ ಮನೆಗಟ್ಟಿ ಕೋಟೆ-ಕೊತ್ತಳವಿಕ್ಕಿ ।
ಚೆನ್ನಿಗನೆ, ಅಸುವಳಿಯೆ ಊರಹೊರಗಿಕ್ಕುವರು ॥ ೨ ॥

ಉದ್ಯೋಗ-ವ್ಯವಹಾರ ನೃಪಸೇವೆ ಮೊದಲಾಗಿ ।
ಕ್ಷುದ್ರತನ ಕಳವು ಪರದ್ರೋಹದಿಂದ ॥
ಬುದ್ಧಿಯಿಂದಲಿ ಧನವ ಗಳಿಸಿಕ್ಕಿ ಅಸುವಳಿಯೆ ।
ಸದ್ಯದಲಿ ಆರುಂಬುವರು ಹೇಳು ಮನುಜಾ ? ॥ ೩ ॥

ಶೋಕಗೈದಳುವವರು ಸತಿ-ಸುತರು ಬಾಂಧವರು ।
ಜೋಕೆತಪ್ಪಿದ ಬಳಿಕ ಅರ್ಥ ವ್ಯರ್ಥ ॥
ಲೋಕದಲಿ ಸ್ಥಿರವಾದ ಕೀರ್ತಿ-ಅಪಕೀರ್ತಿಗಳು ।
ಸಾಕಾರವಾಗಿ ಸಂಗಡ ಬಾಹುವಲ್ಲದೆ ? ॥ ೪ ॥

ಅಸ್ಥಿರದ ದೇಹವನು ನೆಚ್ಚಿ ನೀ ಕೆಡಬೇಡ ।
ಸ್ವಸ್ಥದಲಿ ನೆನೆ ಕಾಣೊ ಪರಮಾತ್ಮನ ॥

೧ ಕ. ಸಿ. ಸಿ. ಶಾಳೆಗಳ (೭೬೯೩ [illegible]) ಪ್ರತಿಯಿಂದ ಪ್ರತಿಮಾಡಿದೆ.

ಚಿತ್ತಶುದ್ಧಿಯಲಿ ಶ್ರೀಪುರಂದರವಿಟ್ಠಲನ ।
ಭಕ್ತಿಯಿಂದಲಿ ನೆನೆದು ಮುಕ್ತಿಪಡೆ ಮನವೆ ॥ ೫ ॥

೧೦೧

ರಾಗ—ನಾದನಾಮಕ್ರಿಯ ತಾಳ—ಅಟ

೧ ಲಂಗೋಟಿ ಬಲು ಒಳ್ಳೆಯದಣ್ಣ—ಒಬ್ಬರ ।
ಹಂಗಿಲ್ಲದಂತೆ ಆಚಾರಕೆ ಒದಗುವ ॥ ಪ ॥

ಬಡವರಿಗಾಧಾರವಣ್ಣ—ಈ ಲಂಗೋಟಿ ।
ಅಡವಿಯ ಬೈರಾಗಿಗಳ ಭಾಗ್ಯವಣ್ಣ ॥
ಕಡುಕಳ್ಳರಿಗೆ ಗಂಡ ಮಡಿಧೋತ್ರಗಳ ಮಿಂಡ ।
ನಡುಗುವ ಸಮಯದಿ ಮಡಿಗೆ ಒದಗುವಂಥ ॥ ೧ ॥

ಜಿತಮನಸಂನ್ಯಾಸಿಗಳಿಗಿದೆ ಕೌಪೀನ ।
ವ್ರತವುಳ್ಳ ಬ್ರಹ್ಮಚಾರಿಗೆ ಮುಖ್ಯವು ॥
ಅತಿಶಯವಿದೆ ಆಂಜನೇಯ-ನಾರದರಿಗೆ ।
ಗತಿಯಿಲ್ಲದವರಿಗೆ ಹಿತವಾಗಿ ಇರುವಂಥ ॥ ೨ ॥

ದುಡ್ಡು ಮುಟ್ಟದಂತೆ ದೊರಕುವ ವಸ್ತ್ರವು ।
ದೊಡ್ಡ ಆರಣ್ಯದಿ ಭಯವಿಲ್ಲವು ॥
ಹೆಡ್ಡರಂಜಿ ಲಂಗೋಟಿಯ ಜನರನು ।
ದೊಡ್ಡವರೆಂದು ವಂದಿಸುವರು ಯತಿಗಳ ॥ ೩ ॥

ಮೋಕ್ಷಮಾರ್ಗಕೆ ಕಲ್ಪವೃಕ್ಷವೀ ಲಂಗೋಟಿ ।
ಭಿಕ್ಷಾಕಾರರಿಗೆಲ್ಲ ಅನುಕೂಲವು ॥
ತಕ್ಷಣದೊಳಗೆ ಕಾರ್ಯಗಳ ತೂಗಿಸಿ ಮಾನ- ।
ರಕ್ಷಣೆಗಿದು ಬಹು ರಮ್ಯವಾಗಿರುವಂಥ ॥ ೪ ॥

---

೧. ಆ (I) ಮತ್ತು ಓ ಪ್ರತಿಗಳಿಂದ ಆರಿಸಿಕೊಂಡಿದೆ.

ಮಡಿವಾಳರಿಗೆ ಶತ್ರು—ಮಾಂಸದಯ್ಯಗಳ ಮಿತ್ರ ।
ಪೊಡವಿಯೊಳ್ ಯಾಚಕರಿಗೆ ನೆರವು ॥
ದೃಢಭಕ್ತ ಬಲಿಚಕ್ರವರ್ತಿಗೀಸುಗ ನಮ್ಮ ।
ಒಡೆಯ ಶ್ರೀಪುರಂದರವಿಠಲ ಧರಿಸಿದಂಥ ॥ ೫ ॥

## ೧೦೨

ರಾಗ—ಪೂರ್ವಿ ತಾಳ—ಏಕ

೧ ಧನವ ಗಳಿಸಬೇಕಿಂತಹದು—ಈ- ।
ಜನರಿಗೆ ಕಾಣಿಸದಂತಹದು ॥ ಪ ॥

ಕೊಟ್ಟರೆ ತೀರದಂತಹದು—ತನ್ನ- ।
ಬಿಟ್ಟು ಅಗಲಿ ಇರದಂತಹದು ॥
ಕಟ್ಟಿದ ಗಂಟನು ಬಯಲೊಳಗಿಟ್ಟರೆ ।
ಮುಟ್ಟರು ಆರೂ ಅಂತಹದು ॥ ೧ ॥

ಕರ್ಮವನೋಡಿಸುವಂತಹದು ।
ಧರ್ಮವ ಮಾಡಿಸುವಂತಹದು ॥
ನಿರ್ಮಲವಾಗಿಸಿ ಮನಸಿನೊಳಗೆ ನಿಜ- ।
ಧರ್ಮವ ತೋರಿಸುವಂತಹದು ॥ ೨ ॥

ಅಜ್ಞಾನವ ಬಾರದಂತಹದು—ನಿಜ- ।
ಸುಜ್ಞಾನವ ತೋರುವಂತಹದು ॥
ವಿಜ್ಞಾನವನು ಗುರು ಶ್ರೀಪುರಂದರವಿಠಲನ ।
ಪ್ರಜ್ಞೆಯನ್ನು ಕೊಡುವಂತಹದು ॥ ೩ ॥

---

೧. ಈ (೧೧) ಪ್ರತಿಯೊಂದರಲ್ಲಿ [illegible] ಸಿಕ್ಕಿ[illegible]ದೆ.

## ೪ ಹೆಣ್ಣು

### ೧೦೩

ಉಗಾಭೋಗ

೧ ಗಂಡ ಮಾಡಿದ ಪಾಪ ಹೆಂಡತಿಗಿಲ್ಲ ।
ಹೆಂಡತಿ ಮಾಡಿದ ಪಾಪ ಗಂಡಗುಂಟು ।
ಹೆಂಡತಿ ಮಾಡಿದ ಪುಣ್ಯ ಗಂಡಗಿಲ್ಲ ।
ಗಂಡ ಮಾಡಿದ ಪುಣ್ಯ ಹೆಂಡತಿಗುಂಟು ।
ಜೀವ-ಜೀವರ ಭೇದ ನೀನೆ ಉದ್ಧರಿಸಯ್ಯ ।
ಪುರಂದರವಿಠಲ ॥

### ೧೦೪

ರಾಗ—ಕಾಂಬೋದಿ ತಾಳ—ಅಟ

೨ ಹೆಣ್ಣ ನಿಚ್ಛಿಸುವರೆ ಮೂಢ—ಇದನು- ।
ಕಣ್ಣು-ಮೈ-ಮನಗಳಿಂ ಸೋಂಕಲುಬೇಡ ॥ ಪ ॥

ತಾಯಾಗಿ ಮೊದಲು ಪಡೆದಿಹುದು—ಮತ್ತೆ- ।
ಜಾಯೆಯೆಂದೆನಿಸಿ ಕಾಮದಿ ಕೆಡಹುವುದು ॥
ಕಾಯದಿ ಜನಿಸುತ ಬಹುದು—ಇಂತು- ।
ಮಾಯೆಯು ನಿನ್ನ ಬಹುವಿಧದಿ ಕಾಡುವುದು ॥ ೧ ॥

ಹಿತಶತ್ರುವಾಗಿ ಹೊಂದುವುದು—ನಿಮಿಷ- ।
ರತಿಗೊಟ್ಟು ನಿತ್ಯಮುಕ್ತಿಯ ಸೆಳೆಯುವುದು ॥
ಕ್ಷಿತಿಯ ಪೂಜ್ಯತೆ ಕೆಡಿಸುವುದು—ಮುಂದೆ- ।
ಶತಜನ್ಮಗಳಿಗೆ ಹೊಣೆಯಾಗಿ ನಿಲ್ಲುವುದು ॥ ೨ ॥

---

೧ ಥ ಪ್ರತಿಯಿಂದ ಆರಿಸಿಕೊಂಡಿದೆ.
೨ ಅ (II) ಪ್ರತಿಯೊಂದರಲ್ಲಿಯೆ ಇದೆ.

ಬಗೆಯಿದು ತನುವೆಲುವು ನರ-ಖಂಡ—ಅದರೊ- ।
ಳಗೆ ವಾಯುರಂಧ್ರ ಕಿಸುಕುಳದ ಉದ್ದಂಡ ॥
ಭಗವೆಂಬುದು ಮೂತ್ರದ ಭಾಂಡ—ಅದ- ।
ನೊಗಡಿಸದೆ ನಿಜಸುಖವಿಲ್ಲ ಕಂಡೆಯ ॥ ೩ ॥

ವಶನಾದ ವಾಲಿಯ ಕೊಲಿಸಿಹುದು—ಹೀಗೆ- ।
ಹೆಸರುಮಾತ್ರದಿ ದಶಶಿರನಳಿದಿಹುದು ॥
ಶಶಿಯಂಗದಲಿ ಕ್ಷಯವಿಹುದು—ಹೀಗೆ- ।
ಹೆಸರುಪಡೆದ ಕೀಚಕನನಳಿದಿಹುದು ॥ ೪ ॥

ಪಶುಪತಿಯ ದೆಸೆಗೆಡಿಸಿಹುದು—ಹೀಗೆ- ।
ವಸುಧೆಯೊಳ್ ಜೀವರ ಹಸಗೆಡಿಸಿಹುದು ॥
ವಸುಧೇಶನ ನಾಮ ಮರೆಸುವುದು—ನಮ್ಮ- ।
ಅಸಮ ಪುರಂದರವಿಠಲನ ತೊರೆಸುವುದು ॥ ೫ ॥

೧೦೫

ರಾಗ— ಕಾಪಿ ತಾಳ— ಅಟ

೧ ಕಣ್ಣೆತ್ತಿ ನೋಡಲುಬೇಡ—ಅವಳ ।
ಕಣ್ಣ ಬೈತಲೆ ಕಂಡು ಮರುಳಾಗಬೇಡ ॥ ಪ ॥

ಕಣ್ಣಿಟ್ಟ ಕೀಚಕ ಕೆಟ್ಟ—ಪರ- ।
ಹೆಣ್ಣಿಗಾಗಿ ರಾವಣ ತಲೆಕೊಟ್ಟ ॥
ಏನು ಮಾಡಿದಳಣ್ಣ ನಷ್ಟ—ಪರ- ।
ಹೆಣ್ಣನು ನೋಡಿಸಿದವ ಬಲು ಭ್ರಷ್ಟ ॥ ೧ ॥

೧ ಅ (೧) ಪ್ರತಿಯಲ್ಲಿಯಷ್ಟೆ ಸಿಕ್ಕುತ್ತದೆ.

ದೂರದಲ್ಲಿಯೆ ಸುಖವಣ್ಣ—ಅವಳ ।
ಚಾರು ಕಂಚುಕದೊಳಗಿನ ಕುಚವಣ್ಣ ॥
ಸೀರೆಯು ಬಿಗಿದುಟ್ಟ ಹೆಣ್ಣ—ಅವಳ ।
ಓರೆನೋಟ ನೋಡಿ ಹಾರಬೇಡಣ್ಣ । ೨ ॥

ಹಸಿವು ಇಲ್ಲದ ಸವಿಯೂಟ—ತನ್ನ ।
ವಶಕೆ ಬಾರದ ಪರಹೆಣ್ಣಿನ ಕೂಟ ॥
ದೆಸೆದೆಸೆಗಪಕೀರ್ತಿಯಾಟ—ನಮ್ಮ ।
ವಸುಧೇಶ ಪುರಂದರವಿಠಲನೊಳ್ನೋಟ ॥ ೩ ॥

## ೧೦೬

ರಾಗ—ಭೈರವಿ ತಾಳ—ಅಟ

೧ ಗಂಡಬಿಟ್ಟ ಗೈಯಾಳಿ ಕಾಣಣ್ಣ—ಅವಳ ।
ಕಂಡರೆ ಕಡೆಗಾಗಿ ಜಾರಿಪೋಗಣ್ಣ ॥ ಪ ॥

ಊರೊಳಗೆ ತಾನು ಪರದೇಶಿಯೆನ್ನುವಳು ।
ಸಾರುತ ತಿರುಗುವಳು ಮನೆಮನೆಯ ॥
ಕೇರಿ-ಕೇರಿಗುಂಟ ಕೆಲೆಯುತ ತಿರುಗುವಳು ।
ನಾರಿಯಲ್ಲವೊ ಮುಕ್ಕ ಮಾರಿ ಕಾಣಣ್ಣ ॥ ೧ ॥

ಅತ್ತೆ-ಮಾವನ ಕೂಡ ಅತಿ ಮತ್ಸರವ ಮಾಡಿ ।
ನೆತ್ತಿಗೆ ಮದ್ದನೆ ಊಡುವಳು ॥
ಸತ್ಯದ ದೇವರ ಸತ್ಯ ನಿಜವಾದರೆ ।
ಬತ್ತಲಿ ಆಚ್ಚಂಬಿಲೂಡೇನೆಂಬುವಳು ॥ ೨ ॥

೧ ಥ ಪ್ರತಿಯಿಂದ ತೆಗೆದುಕೊಂಡಿದೆ.

ಹಲವು ಜನರೊಳು ಕಿವಿಮಾತನಾಡುವಳು ।
ಹಲವು ಜನರೊಳು ಕಡಿದಾಡುವಳು ॥
ಹಲವು ಜನರೊಳು ಕೂಗಿ ಬೊಬ್ಬೆಯನಿಡುವಳು ।
ತಳವಾರ ಚಾವಡಿಯಲಿ ಒರಲಿಹಳಣ್ಣ ॥ ೩ ॥

ಪರಪುರುಷರ ಕೂಡಿ ಸರಸವಾಡುತ ಹೋಗಿ ।
ನೆರೆದಿದ್ದ ಸಭೆಯಲಿ ಕೆಲೆಯುವಳು ॥
ಮರೆಸಿ ತನ್ನವಗುಣ ಗರತಿಯೆಂದು ಮೆರೆವಳು ।
ಕರಿರೂಪದವಳ ನೀ ಕೆಣಕದಿರಣ್ಣ ॥ ೪ ॥

ಏಸು ಗೃಹಗಳೆಂದು ಎಣಿಸಿ ನೋಡಿಬಂದು ।
ಬೇಸರದೆ ಜನಕೆ ಹೇಳುವಳು ॥
ಲೇಸಾಗಿ ಪುರಂದರವಿಠಲನು ಹೇಳಿದ ।
ಹೇಸಿ ತೊತ್ತನು ನೀನು ಕೆಣಕದಿರಣ್ಣ ॥ ೫ ॥

## ೧೦೭

ರಾಗ—ಕಲ್ಯಾಣಿ ತಾಳ—ಅಟ

೧ ಆಜ್ಞೆಯಿಂದಾಳಬೇಕಣ್ಣ—ಗಂಡ- ।
ನಾಜ್ಞೆಯ ಮೀರಿ ನಡೆವ ಲಂಡಹೆಣ್ಣ ॥ ಪ ॥

ಅತ್ತೆ-ಮಾವನಿಗಂಜದವಳ—ತನ್ನ ।
ಉತ್ತಮ ಪುರುಷನ ಜರಿದು ಝಂಕಿಸುವಳ ॥
ಭೃತ್ಯರ ಕಂಡು ಬಾಧಿಸುವಳ—ನಡು- ।
ನೆತ್ತಿಯಿಂದಲೆ ಮೂಗ ಕೆತ್ತಬೇಕವಳ ॥ ೧ ॥

೧ ಕ. ವಿ. ವಿ. ತಾಳೆಗರಿ (೨೪೫೮-೧೬೫೨) ಪ್ರತಿಯಿಂದ ತೆಗೆದುಕೊಂಡಿದೆ. ೨ ಈ ಪ್ರತಿಯಲ್ಲಿ ಎರಡು ನುಡಿಗಳು ಹೆಚ್ಚಿವೆ.

ಹಟ್ಟಿ-ಹಟ್ಟಿ ತಿರುಗುವಳ—ತನ್ನ- ।
ಗಟ್ಟಿತನದಿ ಮಾರುಮುಲಕು ನುಡಿಯುವಳ ॥
ಬಟ್ಟಕುಚವ ತೋರಿಸುವಳ— ಇನ್ನು- ।
ಹುಟ್ಟುಹುಟ್ಟಿಲಿ ಬಾಯ ಕುಟ್ಟಬೇಕವಳ ॥ ೨ ॥

ಎಂದೂ ಈ ಪರಿಯಿರುವವಳ—ಇನ್ನು- ।
ಕೊಂದು ಮಾಡುವುದೇನು ಬಿಡಬೇಕವಳ ॥
ಒಂದಿಷ್ಟು ಗುಣವಿಲ್ಲದವಳ—ಪು- ।
ರಂದರವಿಠಲರಾಯನಿಗಲ್ಲದವಳ ॥ ೩ ॥

೧೦೮

ರಾಗ—ಸಾರಂಗ ತಾಳ—ರೂಪಕ

೧ ನಂಬಬೇಡ ನಾರಿಯರನು ।
ಹಂಬಲಿಸಿ ಹಾರಯಿಸಬೇಡ ॥
ಅಂಬುಜಾಕ್ಷಿಯರೊಲುಮೆ ಬಯಲು- ।
ಡಂಬಕವೆಂದು ತಿಳಿಯಿರೊ ॥ ಪ ॥

ನೋಟವೆಲ್ಲ ಪುಸಿಯು—ಸತಿಯ- ।
ರಾಟವೆಲ್ಲ ಸಂಚು-ಸನ್ನೆ ॥
ಕೂಟವೆಲ್ಲ ಗನ್ನ-ಘಾತಕ ।
ನೋಟವೆಲ್ಲ ವಂಚನೆ ॥
ಪಾಟಬದ್ಧ ಹೆಂಗಳಲ್ಲಿ ।
ಕೋಟಲೆಗೊಂಡು ತಿರುಗಬೇಡ ॥
ಮಾಟಗಾತಿಯರೊಲುಮೆ ಬಯಲು- ।
ಬೂಟಕವೆಂದು ತಿಳಿಯಿರೊ ॥ ೧ ॥

---

೧ ಆ (೧೧) ಇ (೯೦) ಪ್ರತಿಗಳಿಂದ ಆರಿಸಿದೆ.

ಸೋತೆನೆಂದು ವಿಟಗೆ ದೈನ್ಯ- ।
ಮಾತನಾಡಿ ಮರುಳುಗೊಳಿಸಿ ॥
ಕಾತರವ ಹುಟ್ಟಿಸಿ ಅವನ ।
ಮಾತೆ-ಪಿತರ ತೊಲಗಿಸಿ ॥
ಪ್ರೀತಿಬಡಿಸಿ ಹಣವ ಸೆಳೆದು ।
ರೀತಿಗೆಡಿಸಿ ಕಡೆಯಲವನ ॥
ಕೋತಿಯಂತೆ ಮಾಡಿಬಿಡುವ ।
ಜಾತಿಕಾರ್ತಿ ಹೆಂಗಳೆಯರ ॥ ೨ ॥

ಧರೆಯ ಜನರ ಮೋಹಕೆಳಸಿ ।
ಭರದಿ ನೆಚ್ಚಿ ಕೆಡಲುಬೇಡ ॥
ಎರಳೆಗಂಗಳ ಹೆಂಗಳೊಲುಮೆ ।
ಗುರುಳೆ ನೀರ ಮೇಲಿನ ॥
ಮರೆಯಬೇಡ ಗುರುಮಂತ್ರವ ।
ಸ್ಥಿರವಲ್ಲದ ಜನ್ಮದಲ್ಲಿ ॥
ಕರುಣನಿಧಿ ಪುರಂದರವಿಠಲನ ।
ಚರಣಸ್ಮರಣೆ ಮಾಡಿರೊ ! ॥ ೩ ॥

## ೧೦೯

ರಾಗ—ಕಾಂಬೋದಿ ತಾಳ—ಅಟ

೧ ಪತಿಭಕುತಿಯಿಲ್ಲದಿಹ ಸತಿಯ ಸಂಗ ।
ಪ್ರತಗೆಟ್ಟು ಸುಖಪಡೆಯಲಿಲ್ಲವೊ ರಂಗ ॥ ಪ ॥

ಗಂಡ ಬಂದರೆ ಎದ್ದುಸಿಲ್ಲದೆ ಆ ಕ್ಷಣದಿ ।
ಕಂಡಾಡಿ ಏಕವಚನಂಗಳನಾಗ ॥

೧ ಅ (೧೦) ಇ ಪು ( [illegible] ) ಪ್ರತಿಗಳಿಂದ ಆರಿಸಿದೆ.

ಅಂಡಲೆದು ಮಾರ್ಮಲೆದು ಕಾಡಿಬೇಡುವ—ಇಂಥ ।
ಭಂಡುದೊತ್ತಿನ ಕೂಟ ಏಳುನಾಗರ ಕಾಟ ॥ ೧ ॥

ಒಂದು ತಂದರೆ ಮನೆಗೆ ಹತ್ತಾಗಿ ಭಾವಿಸದೆ ।
ತಂದರೆ ಹತ್ತು ಮನೆಯೊಳಗೊಂದ ಮಾಡಿ ॥
ಇಂದಿಗೆ ಇಲ್ಲವೆಂದು ಮುಖವ ತಿರುಹುತಲಿ ಮದ- ।
ದಿಂದ ಹೋಹಳು ನಾರಿ ಬಹು ದೊಡ್ಡ ಮಾರಿ ॥ ೨ ॥

ಮಕ್ಕಳಿಗೆ ಇಡಲಿಲ್ಲ ಮರಿಗಳಿಗೆ ತುಡಲಿಲ್ಲ ।
ಇಕ್ಕುವಡೆ ಬೆಳ್ಳಿ-ಬಂಗಾರವಿಲ್ಲ ॥
ಚಿಕ್ಕವಳು ನಾ ನಿನ್ನ ಕೈಪಿಡಿದು ಕೆಟ್ಟೆನೆಂಬ ।
ಮೂರ್ಖ ತೊತ್ತಿನ ಸಂಗ ಕುಲಕೆಲ್ಲ ಭಂಗ ॥ ೩ ॥

ತಾಯನು ಹೊರಡಿಸು ತಂದೆಯನು ತೆರಳಿಸು ।
ದಾಯಾದಿಯನು ಮನೆಯಲಿರಿಸಬೇಡ ॥
ಬಾಯಿನ್ನು ಮನೆ ಕಟ್ಟಿ ಬೇರಿರುವ ನಾವೆಂಬ ।
ಮಾಯಕಾತಿಯ ಸಂಗ ಅಭಿಮಾನ ಭಂಗ ॥ ೪ ॥

ಇಷ್ಟನೆಲ್ಲವ ಬಿಟ್ಟು ಕೆಟ್ಟೆನೈ ನಾನಿಂದು ।
ಕಷ್ಟ ಸೆರೆಯೆನುವನೆ ಈ ಪರಿಯಲಿ ॥
ಸೃಷ್ಟಿಗಧಿಕನಾದ ದಿಟ್ಟ ಶ್ರೀಪುರಂದರ- ।
ವಿಟ್ಠಲ ಪಶ್ಚಿಮದ ರಂಗಧಾಮ ॥ ೫ ॥

## ೧೧೦

ರಾಗ—ಪಂತುವರಾಳಿ ತಾಳ—ಅಟ

೧ ಸತಿಗೆ ಸ್ವಾತಂತ್ರ್ಯವ ಕೊಡದಿರಿ—ನೀವು- ।
ಮತಿಗೆಟ್ಟು ೨ ಭ್ರಮೆಯ ಬಡದಿರಿ ॥ ಪ ॥

೧ ಕ. ವಿ. ವಿ. ತಾಳೆಗರಿ (೧೮೫೮-೧೭೫೦) ಪ್ರತಿಯಿಂದ ತೆಗೆದುಕೊಂಡಿದೆ.
೨ ಬಾಯ ಬಿಡದಿರಿ (ರೂಢಿ).

ಪತಿಗೆ ೧ ಬಣ್ಣನೆಮಾತನಾಡ್ಯಾಳು—ತಾನು- ।
ಮತಿಯಿಲ್ಲದೆ ಮೆಚ್ಚನಾಡಳು ॥
ಅತಿ ಹರುಷದಲಿ ಬಂದು ಕೂಡ್ಯಾಳು—ಕೂಡಿ- ।
ಖತಿ-ಕರಕರೆಯನು ಮಾಡ್ಯಾಳು ॥ ೧ ॥

ತಂದೆ-ತಾಯ್ಗಳನೆಲ್ಲ ತೊರಿಸ್ಯಾಳು—ನೀ- ।
ಒಂದೆಡೆ ಬಾಯೆಂದು ಬರಿಸ್ಯಾಳು ॥
ನಿಂದಿಸಿ ಜೆಯ್ಯುತ ಬೆರಸ್ಯಾಳು—ನಿನ್ನ- ।
ನೊಂದು ಪಡಿ ಭತ್ತಕೆ ಬಾಯ ತೆರೆಸ್ಯಾಳು ॥ ೨ ॥

ತಂದದ್ದರೊಳಗರ್ಧ ಕದ್ದಾಳು—ಕದ್ದು- ।
ತಂದು ಸುಳ್ಳುಹೇಳಿ ಮೆದ್ದಾಳು ॥
ಮುಂದಿದ್ದ ಕೂಸಿನ ಹೊದ್ದಳು—ಹತ್ತು- ।
ಮಂದಿಮುಂದೆ ಅಡ್ಡಬಿದ್ದಾಳು ॥ ೩ ॥

ಉಂಡ ಊಟವನೆಲ್ಲ ನೆನೆಸ್ಯಾಳು—ತನ್ನ- ।
ಮಂಡೆ ಕೆದರಿಕೊಂಡು ಸೆಣೆಸ್ಯಾಳು ॥
ಭಂಡುಮಾಡಿ ಬಾಯ ತೆರಿಸ್ಯಾಳು—ನಿನ್ನ- ।
ಕೊಂಡ ಕೋತಿಯಂತೆ ಕುಣಿಸ್ಯಾಳು ! ॥ ೪ ॥

ಕರಿಕರಿ ಸಂಸಾರ ಸ್ಥಿರವಲ್ಲ—ಈ- ।
ದುರುಳ ಹೆಣ್ಣಿನ ಸಂಗ ಸುಖವಿಲ್ಲ ॥
ನೆರೆಹೊರೆಯುವರು ನಗುವರೆಲ್ಲ—ನಮ್ಮ- ।
ಪುರಂದರವಿಠಲನು ತಾ ಬಲ್ಲ ॥ ೫ ॥

೧ ಬಣ್ಣದ (ರೂಢಿ).

## (೫) ಸಂಗ-ಸಹವಾಸ

### ೧೧೧

ರಾಗ—ಕಾಂಬೋದಿ ತಾಳ—ಝಂಪೆ

೧ ಅರಿಯದಧಮನ ಸಂಗ ಕರಗಿದ್ದ ಹಿತ್ತಾಳಿ ।
ಒರೆದು ನೋಡಲು ಬಣ್ಣ ಬರುವುದೇ ಹೇಳಿ ॥ ಪ ॥

ಮಂಜುನೀರನೆ ತಂದು ಚಂದನವ ಹದಮಾಡಿ ।
ಒಂದಾಗಿ ಕೂಡಿ ಪರಮಳವ ಬೇಗ ॥
ಹಂದಿಯನು ಕರೆದು ಸಲೆ ಪೂಸಲು—ಅದು ತನ್ನ ।
ಗಂಜಲವ ನೆನೆನೆನೆದು ಹೋಹಂತೆ ರಮಣಿ ॥ ೧ ॥

ಚೀನಿಕೋಲನೆ ತಂದು ಕೊರೆದು ತುಂಡನೆ ಮಾಡಿ ।
ಶ್ವಾನನನು ಕರೆದು ಬಾಯೊಳಗಿರಿಸಲು ॥
ತಾನದನು ಸವಿಸವಿದು ನೋಡಲರಿಯದೆ ತನ್ನ ।
ದನದ ಮೂಳೆಯ ನೆನೆದು ಹೋಹಂತೆ ರಮಣಿ ॥ ೨ ॥

ಅಂತರವನರಿಯದಲೆ ವಿಾಯು ಹೊಗುವುದರಿಂದ ।
ಅಂತೆ ಇರುವುದೆ ಲೇಸು ಬಹು ಪ್ರೌಢರು ॥
ಚಿಂತಿತಾರ್ಥವನೀವ ಸಗುಣ ಪುರಂದರವಿಠಲ- ।
ನೆಂತೆಂತು ಭಜಿಸಿದರೆ ಅಂತಂತೊಲಿವನಲ್ಲದೆ ॥ ೫ ॥

### ೧೧೨

ರಾಗ—ಕಾಂಬೋದಿ ತಾಳ—ಅಟ

೨ ಸಂಗವೇತಕೆ ಅಲ್ಪರೊಡನೆ ಗುಣವಿಲ್ಲ ।
ಮಂಗಮನುಜನ ಕೂಡ ಮಾತಾಡಸಲ್ಲ ॥ ಪ ॥

---

೧ ಕ. ವಿ. ವಿ. ತಾಳೆಗರಿ (೨೨೮೯–೧೭೦೦) ಪ್ರತಿಯಿಂದ ತೆಗೆದುಕೊಂಡಿದೆ.
೨ ಕ. ವಿ. ವಿ. ತಾಳೆಗರಿ (೧೮೫೨–೧೭೫೨) ಪ್ರತಿಯಿಂದ ತೆಗೆದುಕೊಂಡಿದೆ.

ಪರರ ಕೆಣಕಿ ತನ್ನ ಹಿರಿಯತನ ಕೆಡಲೇಕೆ ? ।
ಹರಕೆಯಿಲ್ಲದ ಮೇಲೆ ಹಾರಯಿಸಲೇಕೆ ? ॥
ಮುರುಕುಮನೆಯಲಿ ತಾ ಕಷ್ಟವ ಪಡಲೇಕೆ ? ।
ಸರಿಬಾರದವರೊಡನೆ ಸರಸ ಮಾತುಗಳೇಕೆ ? ॥ ೧ ॥

ತೊತ್ತಿನ ಕೂಡಾಡಿ ಅತಿದೀಕ್ಷೆ ಕೆಡಲೇಕೆ ? ।
೧ ಹೊತ್ತಿಗಲ್ಲದವನ ಕೂಡ ಗೆಳೆತನದ ಮಾತೇಕೆ ? ॥
ರತ್ನವನು ನಾಯ ಕೊರಳಿಗೆ ಸುತ್ತಿ ಬಿಡಲೇಕೆ ? ।
ಕತ್ತೆಯ ಮೇಲೇರಿ ಕೆಡಲೇಕೆ ಮನುಜಾ ? ॥ ೨ ॥

ನೆಲೆತಪ್ಪಿದ ಮೇಲೆ ನಂಟ-ಬಂಧುಗಳೇಕೆ ? ।
ಸಲುಗೆಯಿಲ್ಲದ ಮೇಲೆ ಛಲವು ತನಗೇಕೆ ? ॥
ಬಲುದೈವ ಪುರಂದರವಿಟ್ಠಲನಿರಲಿಕ್ಕೆ ।
ಹಲವು ದೈವದ ಗೊಡವೆ ನಮಗೇಕೆ ಮನುಜಾ ? ॥ ೩ ॥

## ೧೧೩

ರಾಗ—ಮೋಹನ ತಾಳ—ಆಟ

೨ ಅಜ್ಞಾನಿಗಳ ಕೂಡ ೩ಅಖಿಳ ಸ್ನೇಹಗಳಿಂದ ।
ಸುಜ್ಞಾನಿಗಳ ಕೂಡ ಜಗಳವೇ ಲೇಸು ॥ ಪ ॥

೪ ಡಂಭಕರ ಮನೆಯುಪವಾಸದೂಟಕ್ಕಿಂತ ।
ತುಂಬಿದ ಪಟ್ಟಣದಿ ತಿರಿದುಂಬುವುದೆ ಲೇಸು ॥

೧ ಹೊತ್ತು ವೇಳ್ಯವ ಕಾಣದ.
೨ ಅ (೧) ಆ (II) ಪ್ರೀತಿಗಳಿಂದ ಅರಿಸಿಕೊಂಡಿದೆ.
೩ ಅ (೩) ಅಧಿಕ ಸ್ನೇಹಕ್ಕಿಂತ.
ಆ (II) ಅತಿ ಸ್ನೇಹಕ್ಕಿಂತ.
೪ ಆ ಉಂಬುಡುವುದಕಿಲ್ಲದ ಅರಸನೋಲಗಕಿಂತ.
ಅ (೧) ಸಂಜಿಪಸನ ಮನೆಯು ಕಳವುಮಾಳ್ಪುದರಿಂದ.

ಹಂಬಲಿಸಿ ಹಾಳುಹರಟೆ ಹೊಡೆವುದಕಿಂತ ।
ನಂಬಿ ಹರಿದಾಸರೊಳಾಡುವುದೆ ಲೇಸು ॥ ೧ ॥

೧ ಒಡಲ ಹಂಗಿಸುವರ ಮನೆಯ ಓಗರಕಿಂತ ।
ಕುಡಿನೀರ ಕುಡಿದುಕೊಂಡಿಹುದೆ ಲೇಸು ॥
ಬಿಡದೆ ಕಡಿದಾಡುವರ ನೆರೆಯಲಿಹುದಕಿಂತ ।
ಅಡವಿಯೊಳಜ್ಞಾತವಾಸವೆ ಲೇಸು ॥ ೨ ॥

ಮುಸೆದು ಮತ್ಸರಿಸುವನ ಬಳಿಯಲಿಹುದಕಿಂತ ।
ಹಸನಾದ ಹಾಳುಗುಡಿಗಳೆ ಲೇಸು ॥
ಬಿಸಜಾಕ್ಷ ಪುರಂದರವಿಠಲನ ನೆನೆನೆನೆದು ।
ವಸುಧೆಯೊಳು ಚಿರಕಾಲವಿರುವುದೆ ಲೇಸು ॥ ೩ ॥

## ೧೧೪

ರಾಗ—ಮೋಹನ ತಾಳ—ಅಟ

೨ ಜಾಲಿಯ ಮರವಂತೆ—ದುರ್ಜನರೆಲ್ಲ- ।
ಜಾಲಿಯ ಮರವಂತೆ ॥ ಪ ॥

ಬಿಸಿಲಲಿ ಬಳಲಿ ಬಂದವರಿಗೆ ನೆರಳಿಲ್ಲ ।
ಹಸಿದು ಬಂದವರಿಗೆ ಹಣ್ಣಿಲ್ಲವೊ ॥
ಕುಸುಮವಾಸನೆಯಿಲ್ಲ ಕುಳ್ಳಿರಲು ಸ್ಥಳವಿಲ್ಲ ।
ವಿಷಮರ ದುಸ್ಸಂಗ ಪಡೆವರೇನುಂಟು ॥ ೧ ॥

ಊರ ಹಂದಿಗೆ ಅಲಂಕಾರವ ಮಾಡಲು ।
ನಾರುವ ದುರ್ಗಂಧ ಬಿಡಬಲ್ಲುದೆ ? ॥

---

೧ ಅ (೧) ಒಡನೆ ಹಂಗಿಸುವನ ಮನೆಯುಲುಂಬುದಕಿಂತ.
೩ ಬಿಡದೆ ಜ್ಞಾತಿಗಳೊಡನೆ ಕ್ಲೇಶಪಡುವುದಕಿಂತ.
೨ ೩ ಪ್ರತಿಯಿಂದ ಆರಿಸಿಕೊಂಡಿದೆ.

ಸಾರತತ್ತ್ವಜ್ಞಾನ ಪಾಪಿಗೆ ಹೇಳಲು ।
ಕ್ರೂರಬುದ್ಧಿಯ ಬಿಟ್ಟು ಸಜ್ಜನನಪ್ಪನೆ ? ॥ ೨ ॥

ತನ್ನಿಂದ ಉಪಕಾರ ತೊಟಕಾದರೂ ಇಲ್ಲ ।
ಬಿನ್ನಣ ಮಾತುಗಳು ಮೊದಲೇ ಇಲ್ಲ ॥
ಪನ್ನಗಶಯನ ಪುರಂದರವಿಠಲನಲ್ಲದೆ ।
ಅನ್ಯದೈವಗಳ ಭಜಿಸುವ ನರರು ॥ ೩ ॥

# ೫ ಸಾಮಾನ್ಯನೀತಿ

## ೧ ಉಪದೇಶ

### ೧೧೫

ರಾಗ—ಮುಖಾರಿ ತಾಳ—ಝಂಪೆ

೧ ಮೂರ್ಖರಾದರು ಇವರು ಲೋಕದೊಳಗೆ ।
ಏಕದೈವವ ಬಿಟ್ಟು ಕಾಕುದೈವವ ಭಜಿಸಿ ॥ ಪ ॥

ಒಂಟಿಯಲಿ ಹೆಂಡತಿಯ ಬಿಡುವಾತನೇ ಮೂರ್ಖ ।
ಗಂಟನೊಬ್ಬನ ಕೈಯಲಿಡುವವನೆ ಮೂರ್ಖ ॥
ನಂಟರಿಗೆ ಸಾಲವನು ಕೊಡುವಾತ ಮೂರ್ಖ—ಜಗ- ।
ಕಂಟಕನಾದವನು ಕಡುಮೂರ್ಖನಯ್ಯ ॥ ೧ ॥

ಮುಪ್ಪಿನಲಿ ಹೆಂಡತಿಯ ಮಾಡಿಕೊಂಬವ ಮೂರ್ಖ ।
ಸರ್ಪನಲಿ ಗಾರುಡವ ನಡಸುವನೆ ಮೂರ್ಖ ॥

೧ ಕ. ವಿ. ವಿ. ತಾಳೆಗರಿ ([illegible]) ಪ್ರತಿಯಿಂದ ತೆಗೆದುಕೊಂಡಿದೆ.

ಇಪ್ಪತ್ತು ಒಂದು ಕುಲ ಉದ್ಧರಿಸದವ ಮೂರ್ಖ ।
ಅಪ್ಪ ರಂಗಯ್ಯನನು ನೆನೆಯದವ ಮೂರ್ಖ ॥ ೨ ॥

ಸತ್ತ ಕರುವಿನ ತಾಯ ಹಾಲ ಕರೆವವ ಮೂರ್ಖ ।
ಒತ್ತೆಯಿಲ್ಲದೆ ಸಾಲ ಕೊಡುವವನೆ ಮೂರ್ಖ ॥
ಹತ್ತೆಂಟು ಬಗೆಯಲ್ಲಿ ಹಂಬಲಿಸುವವ ಮೂರ್ಖ ।
ಹೆತ್ತ ತಾಯ್ ಬೈವವನು ಕಡುಮೂರ್ಖನಯ್ಯ ॥ ೩ ॥

ಪಡೆದ ಮಗಳನು ಮಾರಿ ಒಡಲಹೊರೆವವ ಮೂರ್ಖ ।
ಮಡದಿ ಹುಟ್ಟಿದ ಮನೆಯೊಳಿರುವವನೆ ಮೂರ್ಖ ॥
ಬಡತನವು ಬಂದರೆ ಬಯಸಿಕೊಂಬವ ಮೂರ್ಖ ।
ದೃಢಬುದ್ಧಿಯಿಲ್ಲದವ ಕಡುಮೂರ್ಖನಯ್ಯ ॥ ೪ ॥

ರಾಮನಾಮವ ಸ್ಮರಿಸದಿದ್ದಾತನೇ ಮೂರ್ಖ ।
ಹೇಮವನು ಗಳಿಸಿ ಉಣದಿದ್ದವನೆ ಮೂರ್ಖ ॥
ನೇಮದಲಿ ಹಿರಿಯರನು ನೋಡದವ ಮೂರ್ಖ—ದುರ್- ।
ನಾಮವನು ಕೊಂಬಾತ ಕಡುಮೂರ್ಖನಯ್ಯ ॥ ೫ ॥

ಕಾಶಿಯಲಿ ದೇಹವನು ತೊಳೆಯದಿದ್ದವ ಮೂರ್ಖ ।
ಭೂಸುರರಿಗನ್ನವನು ಕೊಡದವನೆ ಮೂರ್ಖ ॥
ಶೇಷಪತಿ ಕೃಷ್ಣನ ನೆನೆಯದವ ಮೂರ್ಖ—ಹರಿ- ।
ದಾಸನಾಗಿರದವನು ಕಡುಮೂರ್ಖನಯ್ಯ ॥ ೬ ॥

ಉಂಡ ಮನೆಗೆರಡನ್ನು ಬಗೆವಾತನೇ ಮೂರ್ಖ ।
ಕೊಂಡೆಯವ ಪೇಳಿ ತಿರುಗುವವ ಮೂರ್ಖ ॥
ಪುಂಡರೀಕಾಕ್ಷ ಶ್ರೀಪುರಂದರವಿಠಲನ ।
ಕೊಂಡು ಭಜಿಸದ ಮನುಜ ಕಡುಮೂರ್ಖನಯ್ಯ ॥ ೭ ॥

## ೧೧೬

ರಾಗ—ಪೂರ್ವಿ ತಾಳ—ಆದಿ

೧ ಏಕೆ ಮೂರ್ಖನಾದೆ—ಮನುಜಾ- ।
ಏಕೆ ಮೂರ್ಖನಾದೆ ? ॥ ಪ ॥

ಏಕೆ ಮೂರ್ಖನಾದೆ ನೀನು ।
ಕಾಕುಬುದ್ಧಿಗಳನು ಬಿಟ್ಟು ॥
ಲೋಕನಾಥನ ನೆನೆಯೊ ಮನುಜಾ ॥ ಅ ಪ ॥

ಮಕ್ಕಳು ಹೆಂಡಿರು ತನ್ನವರೆಂದು ।
ರೊಕ್ಕವನು ಗಳಿಸಿಕೊಂಡು ।
ಸೊಕ್ಕಿಂದ ತಿರುಗುವರೇನೊ—ಹೇ ಮನುಜಾ ॥ ೧ ॥

ಕಕ್ಕಸದ ಯಮದೂತರು ಬಂದು ।
ಲೆಕ್ಕವಾಯಿತು ನಡೆಯೆಂದರೆ ।
ಸಿಕ್ಕವರೆಲ್ಲ ಬಿಡಿಸುವರೇನೊ—ಹೇ ಮನುಜಾ ॥ ೨ ॥
ಅರಿಷಡ್ವರ್ಗದ ಆಟವ ಬಿಟ್ಟು ।
ಪುರಂದರವಿಠಲನ ಹೊಂದಲುಬೇಕು ।
ಹರಿಯನು ಸೇರುವ ಮಾರ್ಗವ ನೋಡೊ—
ಹೇ ಮನುಜಾ ॥ ೩ ॥

೧ ಏ (ದಾ ೧) ಆ (I) ಜ್ಞ ಶ್ರೀ ಪ್ರತಿಗಳಿಂದ ಆರಿಸಿದೆ.

ಏ ಪ್ರತಿಯನ್ನು ಬಿಟ್ಟು ಉಳಿದ ಪ್ರತಿಗಳಲ್ಲಿ ಕೆಳಗಿನ ಎರಡು ಹೆಚ್ಚಿನ ನುಡಿಗಳಿವೆ

ದಾನ-ಧರ್ಮವನ್ನು ಮಾಡು ।
ಜ್ಞಾನದಿಂದ ತಿಳಿದು ನೋಡು ।
ಹೀನಬುದ್ಧಿ ಮಾಡುವರೇನೊ— ಹೇ ಮನುಜಾ ॥
ಸಾಧು-ಸಜ್ಜನ ಸಂಗವ ಮಾಡು ।
ಭೇದಾಭೇದವ ತಿಳಿದು ನೋಡು ।
ಸಾಡಬುದ್ಧಿ ಮಾಡುವರೇನೊ—ಹೇ ಮನುಜಾ ॥

೧೧೭

ರಾಗ—ಮಧ್ಯಮಾವತಿ ತಾಳ—ಆದಿ

೧ ಎಲ್ಲವನು ಬಲ್ಲೆನೆನ್ನುವಿರಲ್ಲ ।
ಸಲ್ಲದ ಗುಣ ಬಿಡಲಿಲ್ಲ ॥ ಪ ॥
ಸೊಲ್ಲಿಗೆ ಶರಣರ ಕಥೆಗಳ ಪೇಳುತ ।
ಅಲ್ಲದ ನುಡಿಗಳ ನುಡಿಯುವಿರಲ್ಲ ॥ ಅ ಪ ॥

ಕ್ಷೇಮೆಯನುಟ್ಟು ತಿರುಗುವಿರಲ್ಲ ।
ಕಾಮವ ಬಿಡಲಿಲ್ಲ ॥
ನೇಮ-ನಿಷ್ಠೆಗಳ ಮಾಡುವಿರಲ್ಲ ।
ತಾಮಸ ಬಿಡಲಿಲ್ಲ ॥
ತಾವೊಂದರಿಯದೆ ಪರರಲಿ ತಿಳಿಯದೆ ।
ಕೀವದ ಕುಳಿಯಲಿ ಬೀಳುವಿರಲ್ಲ ॥ ೧ ॥

ಗುರುಗಳ ಸೇವೆಯ ಮಾಡಿದಿರಲ್ಲ ।
ಗುರುತಾಗಲೆ ಇಲ್ಲ ॥
ಪರಿಪರಿ ದೇಶವ ತಿರುಗಿದಿರಲ್ಲ ।
ಪೊರೆಯುವರಿನ್ನಿಲ್ಲ ॥
ಅರಿವೊಂದರಿಯದೆ ಆಗಮ ತಿಳಿಯದೆ ।
ನರಕಕೂಪದಲಿ ಬೀಳುವಿರಲ್ಲ ॥ ೨ ॥

ಬ್ರಹ್ಮಜ್ಞಾನಿಗಳೆನಿಸುವಿರಲ್ಲ ।
ಹಮ್ಮನು ಬಿಡಲಿಲ್ಲ ॥
ಸುಮ್ಮನೆ ಯಾಗವ ಮಾಡುವಿರಲ್ಲ ।
ಹೆಮ್ಮೆಯ ಬಿಡಲಿಲ್ಲ ॥
ಗಮ್ಮನೆ ಪುರಂದರವಿಠಲನ ಪಾದಕೆ ।
ಒಮ್ಮೆಯಾದರು ಸೇವೆರಗಲೆ ಇಲ್ಲ ॥ ೩ ॥

೧ ತ ಪ್ರತಿಯಿಂದ ತೆಗೆದುಕೊಂಡಿದೆ.

೧೧೮

ಉಗಾಭೋಗ

೧ ಕೀರ್ತಿ ಕಿಂಕರಗೆ ಅಪಕೀರ್ತಿ ಮಂಕುಗಳಿಗೆ ।
ನಷ್ಟ ಕಷ್ಟರಿಗೆ ಲಾಭ ಮಹಾತ್ಮರಿಗೆ ।
ದಾರಿದ್ರ್ಯ ದ್ರೋಹಿಗಳಿಗೆ ವಚನಭ್ರಷ್ಟರಿಗೆ ಅಂಧಂತಮಸು ।
ಸಂದೇಹವಿಲ್ಲವಿದಕೆ ಪುರಂದರವಿಠಲ ॥

೧೧೯

೨ ಕುಡಿಯ ಕೊಟ್ಟ ಅಮೃತದಂತಹ ನೊರೆಹಾಲನೊಲ್ಲದೆ ।
ಬಟ್ಟಲೊಳಗೆ ತಿರಿತಿಂಬರು ಕೆಲರು ।
ಪಟ್ಟವಾಳಿಯ ಮುಂದೆ ಅರಿವೆಯ ಬಯಸುವರು ।
ಈ ಭ್ರಷ್ಟರಿಗೇನೆಂಬೆ ಪುರಂದರವಿಠಲ ॥

೧೨೦

೩ ಅಲ್ಲದ ಕರ್ಮವ ಆಚರಿಸಿದವ ಕೆಟ್ಟ ।
ಬಲ್ಲಿದರೊಳು ಸೆಣಸಿ ಮೆರೆದವ ಕೆಟ್ಟ ।
ಒಲ್ಲಿ ಮಾತಿನ ಸತಿಯರ ನಂಬಿದವ ಕೆಟ್ಟ ।
ಪುಲ್ಲನಾಭ ಸಿರಿಪುರಂದರವಿಠಲನ ।
ಸೊಲ್ಲಿಗಳ ನಂಬದವ ಕೆಟ್ಟ ।
ನರಗೇಡಿ—ಬಲ್ಲಿದರೊಳು ಸೆಣಸಿದವ ಕೆಟ್ಟ ॥

೧ ಧ ಪ್ರತಿಯಿಂದ ತೆಗೆದುಕೊಂಡಿದೆ.
೨ ಧ ಪ್ರತಿಯಿಂದ ತೆಗೆದುಕೊಂಡಿದೆ.
೩ ಅ (VI) ನೇ ಪ್ರತಿಗಳಿಂದ ತೆಗೆದುಕೊಂಡಿದೆ.

### ೧೨೧

೧ ಅನುಕೂಲವಿಲ್ಲದ ಸತಿಯ ವರ್ಜಿಸಬೇಕು ।
ವಿನಯದಿ ಗುರು-ಹಿರಿಯರ ಪೂಜಿಸಬೇಕು ।
ಮನಕೆ ಬಾರದ ಠಾವು ಬಿಟ್ಟು ತೊಲಗಬೇಕು ।
ವನಜನಾಭನ ದಾಸರ ಸಂಗವಿರಬೇಕು ।
ನೆನೆಯುತಲಿರಬೇಕು ಪುರಂದರವಿಠಲನ ॥ ೧ ॥

### ೧೨೨

ರಾಗ—ಪೂರ್ವಿ ತಾಳ—ಅಟ

೨ ಕೊಬ್ಬಿನಲಿರಬೇಡವೊ—ಏ ನಮ್ಮ ಮನುಜಾ ।
ಕೊಬ್ಬಿನಲಿರಬೇಡವೊ ॥ ಪ ॥

ಸಿರಿಬಂದ ಕಾಲಕೆ ಸಿರಿಮುದವೆಂಬರು ।
ಬಿರಿದು ಬಿರುದು ಮೇಲಕೆ ಮಾಳ್ಪರು ॥
ಸಿರಿಹೋದ ಮರುದಿನ ಬಡತನ ಬಂದರೆ ।
ಹುರುಕು-ಕಜ್ಜಿಯ ತುರಿಸಿ ತಿರುಗುವರಯ್ಯ ॥ ೧ ॥

ಒಡವೆ ವಸ್ತುವನಿಟ್ಟು ಬಡಿವಾರ ಮಾಳ್ಪರು ।
ನಡೆಯಲಾರೆನೆಂದು ಬಳುಕುವರು ॥
ಸಿಡಿಲು ಎರಗಿದಂತೆ ಬಡತನ ಬಂದರೆ ।
ಕೊಡವ ಹೊತ್ತು ನೀರ ತರುವರಯ್ಯ ॥ ೨ ॥

ವ್ಯಾಪಾರ ಬಂದಾಗ ವ್ಯಾಪಾರ ಮಾಳ್ಪರು ।
ಶಾಪಿಸಿಕೊಂಬರು ಬಡವರ ಕೈಲಿ ॥

---

೧ ಝು (ಅ) ಪ್ರತಿಯಿಂದ ಆರಿಸಿಕೊಂಡಿದೆ.

೨ ಕ. ವಿ. ವಿ. ತಾಳೆಗರಿ (೧೪೫೮–೧೭೫೦) ಪ್ರತಿಯಿಂದ ತೆಗೆದುಕೊಂಡಿದೆ.

ಶ್ರೀಪತಿ ಪುರಂದರವಿಠಲನು ಮುನಿದರೆ ।
ಭೂಪಾರದೊಳಗೆಲ್ಲ ತಿರಿದುಂಬರಯ್ಯ! ॥ ೩ ॥

## ೧೨೩

ರಾಗ—ಕಾಂಬೋದಿ ತಾಳ—ಅಟ

೧ ನಿಂದೆಯಾಡಲುಬೇಡ ನೀಚಾತ್ಮ—ನಿನ- ।
ಗೆಂದೆಂದು ದೊರಕನು ಪರಮಾತ್ಮ ॥ ಪ ॥

ನರಜನ್ಮಕೆ ಬಂದು ನೀ ನಿಂತಿ—ಪರಿ- ।
ಪರಿ ಮಾಡಿದೆಯೊ ಪರದ ಚಿಂತಿ ॥
ಗರುವದಿಂದ ಹಲ್ಲುತಿಂತಿ—ಇದು ।
ಸ್ಥಿರವಲ್ಲ ಮೂರುದಿನದ ಸಂತಿ ॥ ೧ ॥

ಪರಸತಿಯುರ ಕಂಡು ಹೋಗಿ—ಅಲ್ಲಿ- ।
ಪರಮಾತ್ಮನ ಧ್ಯಾನವನ್ನು ನೀ ನೀಗಿ ॥
ಪರಲೋಕ ಹೇಗೆ ಕಾಣುವೆ ಕಾಗಿ—ನೀನು- ।
ಪರಿಪರಿಯಿಂದಲಿ ನೋಡೆಲೊ ಗೂಗಿ ॥ ೨ ॥

ಬಾಳೆಗೆ ಒಂದೇ ಫಲವು ನೋಡು—ಅಲ್ಲಿ- ।
ಕಾಳುಸುಳ್ಳರಿಗೆ ಬಲು ತೋಡು ॥
ಬಾಳ್ವೆವಂತರ ಹುಡುಕಾಡು—ಶ್ರೀ- ।
ಲೋಲ ಪುರಂದರವಿಠಲನೊಳಾಡು ॥ ೩ ॥

೧ ಪ (ಪಾ [illegible]) [illegible] ( [illegible] ) ಪ್ರತಿಗಳಿಂದ [illegible]ಕೊಂಡಿದೆ.

## ೧೨೪

ರಾಗ—ಕಾಪಿ ತಾಳ—ಅಟ

೧ ನೆಚ್ಚದಿರೋ ಪ್ರಾಣಿ ಸಂಸಾರ ಸ್ಥಿರವೆಂದು ।
ಹುಚ್ಚುಬುದ್ಧಿಯಲಿ ನೀ ಕೆಡಬೇಡ ॥ ಪ ॥

ಎಚ್ಚರಿತುಕೊಂಡು ಧರ್ಮದಿ ನಡೆ ಕಣ್ಣನು ।
ಮುಚ್ಚಿದ ಮೇಲುಂಟೆ—ನರಜನ್ಮ ಸ್ಥಿರವಲ್ಲ ॥ ಅ ಪ ॥

ಅಷ್ಟಕಂಬವನಿಕ್ಕಿ ಚೌಕದುಪ್ಪರಿಗೆಯ ।
ಕಟ್ಟಿದ ಮನೆ ಇದ್ದಂತಿಹುದು ॥
ಹೊಟ್ಟೆತುಂಬ ಉಣದೆ ಧನವ ಗಳಿಸಿ—ಬ- ।
ಚ್ಚಿಟ್ಟಲ್ಲಿರದೆ ಸಂಗಡ ಬಾಹೋದಲ್ಲ ॥ ೧ ॥

ಅತಿ ಪ್ರೀತಿಯಿಂದ ಮದುವೆಯಾದ ಮೋಹದ ।
ಸತಿ ತನ್ನ ಮರಣದ ಕಾಲಕ್ಕೆ ॥
ಗತಿಯಾವುದೆನುತಲೆ ಮರುಗಿಪ್ಪಳಲ್ಲದೆ ।
ಜತೆಯಾಗಿ ನಿನ್ನ ಸಂಗಡ ಬಾಹಳಲ್ಲ ॥ ೨ ॥

ಒಂದೊಂದು ಪರಿಯ ಬುದ್ಧಿಯ ಪೇಳಿ ಸಲಹಿದ ।
ಕಂದ ನಿನ್ನವಸಾನ ಕಾಲಕೆ ॥
ಮುಂದೇನು ಸಂಸಾರ ನಡೆಸಲುಪಾಯವೇ- ।
ನೆಂದು ಚಿಂತಿಸುವ ಸಂಗಡ ಬಾಹನಲ್ಲ ॥ ೩ ॥

ನಂಟರಿಷ್ಟರು ಬಂಧು-ಬಳಗವು ಹರಿ ಕೊಟ್ಟು- ।
ದುಂಟಾದರೆ ಬಂದು ಉಣ್ಣುವರು ॥
ಕಂಟಕ ಬಂದರೆ ಹೊತ್ತು ಕಾಷ್ಠದೊಳಿಟ್ಟು ।
ಕಂಟೆಯ ತಂದೊಟ್ಟಿ ಸುಡುವರು ಕಾಣೊ ! ॥ ೪ ॥

೧ ಕ. ವಿ. ವಿ. ತಾಳೆಗರಿ ([illegible]) ಪ್ರತಿಯಿಂದ ತೆಗೆದುಕೊಂಡಿದೆ.

ಇಂತಿದು ಒಂದು ಪ್ರಯೋಜನ ನಿನಗಿಲ್ಲ ।
ಅಂತ್ಯಕಾಲಕೆ ಸಂಗಡ ಬಾಹುದು ॥
ಕಂತುಜನಕ ನಮ್ಮ ಪುರಂದರವಿಠಲನ ।
ಸಂತತ ಧ್ಯಾನದೊಳಿರು ಕಾಣೊ ಮನುಜ ॥ ೫ ॥

### ೧೨೫

ರಾಗ—ಸೌರಾಷ್ಟ್ರ ತಾಳ—ಅಟ

೧ ಬಲ್ಲಿದ ನೀನೆಂದು ಬಡವರ ಬಾಯನು ಬಡಿಯದಿರೆಚ್ಚರಿಕೆ ।
ಎಳ್ಳಷ್ಟು ತಪ್ಪಿದರೆ ಯಮನವರೆಳೆದೊಯ್ವರು ಎಚ್ಚರಿಕೆಚ್ಚರಿಕೆ ॥ಪ॥

ಮಾಡು ದಾನ-ಧರ್ಮ ಪರ ಉಪಕಾರವ ಮರೆಯದಿರೆಚ್ಚರಿಕೆ ।
ಕೇಡನೆಣಿಸಬೇಡ ನಂಬಿದ ಠಾವಿಗೆ ಕೆಡುವೆ ಮತ್ತೆಚ್ಚರಿಕೆ ॥
ಮೂಢರ ಒಡನಾಡಿ ಮುಂದರಿಯದೆ ನೀನು ಮುಸಿಯದಿರೆಚ್ಚರಿಕೆ ।
ನೋಡಿ ನಡೆವ ಸುಗುಣರ ನೋಡಿ ನಡೆಯೊ ನೀ ನಟನೆ ಬೇಡೆಚ್ಚರಿಕೆ ॥೧॥

ಹೊನ್ನು-ಹೆಣ್ಣು-ಮಣ್ಣು ತನ್ನನೆ ಅಣಕಿಸಿ ಹೋಹುವು ಎಚ್ಚರಿಕೆ ।
ಮುನ್ನ ಮಾಡಿದ ಫಲದಿಂದಲಿ ಬಂದೆಯೊ ಮುಂದೆ ಇನ್ನೆಚ್ಚರಿಕೆ ॥
ಚೆನ್ನಾಗಿ ತಾ ಬಾಳಿ ಬದುಕುವೆನೆಂತೆಂಬ ಚೇಷ್ಟೆ ಬೇಡೆಚ್ಚರಿಕೆ ।
ಬೆನ್ನನು ಬಡಿಯುವೆ ಬಿಡುವರೆ ಯಮನವರು ಮರೆಯದಿರೆಚ್ಚರಿಕೆ ॥ ೨ ॥

ಬಾಳಿ ಬದುಕಿ ಸಿರಿಬಾಹಗೆ ಟವಳಿಯ ಬಣಗು ಬೇಡೆಚ್ಚರಿಕೆ ।
ಹಾಳು ಬದುಕಿಗಾಗಿ ಹಲವರ ಕೂಡಣ ಹಗಣ ಬೇಡೆಚ್ಚರಿಕೆ ॥

---

೧ ಅ (ಜಿಡಿ ೫) ಪ್ರತಿಯಿಂದ ಆರಿಸಿಕೊಂಡಿದೆ.

ಪಿ. ಸೂ:— ಎಚ್ಚರ ತಪ್ಪಿ ಇರು ಕಂಡೆಯ ಪಾತಕಜೀವವೆ ಎಚ್ಚರಿಕೆಚ್ಚರಿಕೆ—ಸ-।
ಮ್ಮಚ್ಯುತನ ಸೇವೆಗನುಕೂಲವಾಗು ನೀ ಎಚ್ಚರಿಕೆಚ್ಚರಿಕೆ ॥ಪ॥

ಈ ಪಲ್ಲವಿ ಹಾಗು ಎರಡು ಸಾಲುಗಳ ಐದು ನುಡಿಗಳುಳ್ಳ ಹಾಡು (೮) ಅ(vi) ಮತ್ತು (೩) ರಘು ೫—೧೦ ಪ್ರತಿಗಳಲ್ಲಿದೆ.

ಕಾಲನವರು ಬಂದು ಆವಾಗ ಕರೆವರೊ ಕಾಣದು ಎಚ್ಚರಿಕೆ ।
ಶ್ರೀಲೋಲ ಪುರಂದರವಿಟ್ಠಲರಾಯನ ಮರೆಯದಿರೆಚ್ಚರಿಕೆ ॥ ೩ ॥

೧೨೬

ರಾಗ—ಸೌರಾಷ್ಟ್ರ ತಾಳ—ಅಟ

೧ ವರಕವಿಗಳಿದ್ದಲ್ಲಿ ನರಕವಿಗಳ ಕೊಂಡಾಡಬಾರದು—ಇಂಥ- ।
ಧರಣಿಯ ಕಲ್ಲಿಗೆ ಸ್ಥಿರವೆಂದು ಪೂಜೆಯ ಮಾಡಬಾರದು ॥ ಪ ॥

ಅಡಿಹೋದ ಮಡಕೆಗೆ ಜೋಡಿಸಿ ಒಲೆಗುಂಡ ಹೂಡಬಾರದು ।
ಬಡತನ ಬಂದರೆ ನಂಟರ ಬಾಗಿಲ ಸೇರಬಾರದು ॥ ೧ ॥

ಮಡದಿಯ ನುಡಿ ಕೇಳಿ ಬಡವರ ಜಗಳಕೆ ಹೋಗಬಾರದು—ಬಹಳ ।
ಬಡತನ ಬಂದವಳ ಕೈಯಿಂದ ಅಡಿಗೆಯ ಉಣ್ಣಬಾರದು ॥ ೨ ॥

ಪಾಪಿಗಳಿದ್ದಲ್ಲಿ ರೂಪದ ಒಡವೆಯ ತೋರಬಾರದು—ಕಡು- ।
ಕೋಪಿಗಳಿದ್ದಲ್ಲಿ ಅನುಕೂಲಗೋಷ್ಠಿ ಮಾತಾಡಬಾರದು ॥ ೩ ॥

ಪರರ ನಿಂದಿಸಿ ಪರಬ್ರಹ್ಮ ರೂಪೇಂದ್ರನ ಜರೆಯಬಾರದು ।
ವರದ ಶ್ರೀಪುರಂದರವಿಠಲನ ಸ್ಮರಣೆಯ ಮರೆಯಬಾರದು ॥ ೪ ॥

೧೨೭

ರಾಗ—ಕೇದಾರಗೌಳ ತಾಳ—ತ್ರಿವುಡೆ

೨ ತಾಳಿಯ ಹರಿದು ಬೀಸಾಟೆ—ನೀ- ।
ಹೇಳಿದವರ ಮಾತ ಕೇಳೀ ಗೈಯಾಳಿ ॥ ಪ ॥

೧ ಕ. ವಿ. ವಿ. ತಾಳೆಗರಿ (೧೮೫೮–೧೬೫೦) ಪ್ರತಿಯಿಂದ ತೆಗೆದುಕೊಂಡಿದೆ.
೨ ಏ (ವಾ ೨) ಝು (೩) ಪ್ರತಿಗಳಿಂದ ಆರಿಸಿ ಹೊಂದಿಸಿ ಬರೆದಿದೆ.

ಎಲ್ಲಮ್ಮ ಎಕಲಾತಿ ಉರಿಮಾರಿ ಉಡಚಮ್ಮ |
ಖುಲ್ಲ ಮಹಿಷಾಸುರ ದೈವವೆಂದೆ ||
ಎಲ್ಲ ದೈವಗಳು ನಾಯಾಗಿ ಹರಿವಾಗ |
ಕಳ್ಳದೇವರ ನೆಚ್ಚಿ ಕೆಡಬೇಡ ಮೂಳಿ || ೧ ||

ಕೊರಳೊಳು ಕವಡಿಯು ಶಿರದಲ್ಲಿ ಹಡಲಿಗೆ |
ಕರದಲಿ ದೀವಟಿಗೆ ಉರಿಸುತಲಿ ||
ಉರಿವ ಪಂಜನೆ ಪಿಡಿದು ಉಧೊ ಉಧೊ ಎನುತಲಿ |
ತಿರುಗಿದೆ ಕೇರಿಕೇರಿಗುಂಟ ಮೂಳಿ || ೨ ||

ಪಿಡಿಯ ಮುಳ್ಳನೆ ತಂದು ನಡುಬೆನ್ನಲೂರಿಕೊಂಡು |
ಒಡೆಯ ಮಲ್ಲಣನೆಂದು ಜೋಲಾಡುತ ||
ಕಡುಹಿಲಿ ಯಮದೂತರು ಬಂದು ಎಳೆವಾಗ |
ಒಡೆಯ ಮಲ್ಲಣ್ಣೆತ್ತ ಹೋದನೆ ಮೂಳಿ || ೩ ||

ಗುಂಡಿಗೆ ಎಣ್ಣೆಯ ಎಡಗೈಯಲಿಟ್ಟುಕೊಂಡು |
ಗುಂಡಿಗೆ ತುಪ್ಪವ ಮುಂದಿಟ್ಟುಕೊಂಡು ||
ಮಿಂಡೆ ಮೈಲಾರಿಯ ಖಂಡೆರಾಯನೆಂದು |
ಕೆಂಡದ ಮೇಲೆ ರೊಟ್ಟಿಯ ಸುಟ್ಟೆ ಮೂಳಿ || ೪ ||

ಶ್ರಾವಣಮಾಸದ ಚವತಿಯ ಉಪವಾಸ |
ಹಾವನು ಮನೆಯಲಿ ತಂದಿಟ್ಟುಕೊಂಡು ||
ಕಣ್ಣು ಕಾಣದೆಂದು ನಾಗನ ಕಾಟವೆಂದು |
ಮಣ್ಣು ಹುತ್ತಿಗೆ ಹಾಲನೆರೆದೆಯೆ ಮೂಳಿ || ೫ ||

ಹೊನ್ನನಾಗರ ಮಾಡಿ ಬಣ್ಣಿಸಿ ಕಿಸಿಗಿಟ್ಟು |
ನನ್ನಯ್ಯ ನಾಗಪ್ಪ ಸಲಹೆನ್ನುತ ||
ಚಿನ್ನ ನಾಗರ ಬಂದು ಓಡಾಡಿ ಕಡಿವಾಗ |
ಹೊನ್ನನಾಗರ ಎತ್ತ ಹೋದನೆ ಮೂಳಿ || ೬ ||

ಬನದಹುಣ್ಣಿವೆ ದಿನ ಬಾಗಿಲ ತೋರಣ- ।
ವನು ಕಟ್ಟಿ ಬರಿದೆ ಪಲ್ಲೆಯುವ ಬೀರಿ ॥
ದಿನಪಸುತನ ದೂತರು ಬಂದು ಎಳೆವಾಗ ।
ಬನದ ಶಂಕರಿ ಎತ್ತ ಹೋದಳೆ ಮೂಳಿ ॥ ೭ ॥

ಭಾರತಹುಣ್ಣಿವೆ ಓರಣದಲಿ ಮಿಂದು ।
ಹೂರಣದಾರತಿ ಮನೆಯೊಳಗೆ ॥
ಪೋರಬುದ್ಧಿಯಿಂದ ಸೀರೆಯ ಕಳೆದಿಟ್ಟು ।
ಹಾರಿ ಹಾರಿ ಕುಣಿದು ನಿಂತೆ ಎಲೆ ಮೂಳಿ ॥ ೮ ॥

ನಡುಮನೆ ಗೋಡೆಯ ಒಡೆದು ಮಾಡವ ಮಾಡಿ ।
ಸಡಗರದಿ ಬುಕ್ಕಿಟ್ಟು ಲಾಡಿ ತಂದು ॥
ಒಡೆಯ ಹಿರಿಯಣ್ಣಗೆ ತೆಂಗಿನಕಾಯಿ ಒಡೆದು ।
ಎಡೆಗೊಂಡು ಪೂಜಿಸಿದೆ ಮೂಳಿ ಗೈಯಾಳಿ ॥ ೯ ॥

ಹಡೆದ ಮಗನ ಮದುವೆ ನಾಳೆ ಮಡಿವಾಳನ ।
ಮಡದಿಯ....ರೋಮುವ ತಂದು ॥
ಸಡಗರದಿಂದಲಿ ನಡುಗಂಬಕರ್ಪಿಸಿ ।
ಬಿಡದೆ ಪೂಜಿಸುವಿಯೆ ಗೈಯಾಳಿ ಮೂಳಿ ॥ ೧೦ ॥

ಹಿಂದಾದ ಭಕುತಿಯು ಹೇಗಾದರಾಗಲಿ ।
ಮುಂದಣ ಮುಕ್ತಿಯ ಬೇಡಿಕೊಂಡು ॥
ತಂದೆ ಶ್ರೀಪುರಂದರವಿಟ್ಠಲರಾಯನ ।
ಕುಂದದೆ ಅನುದಿನ ನೆನೆ ಕಾಣೆ ಮೂಳಿ ॥ ೧೧ ॥

## ೧೨೪

ರಾಗ—ತೋಡಿ ತಾಳ—ಆದಿ

೧ ಕಡುಕೃಪೆಯಿಂದ ಹರಿ ಒಲಿದರೆ ಸತ್ಯದ ।
ನಡೆವಳಿ ವಚನವೆ ಸಾಕ್ಷಿ ॥
ದೃಢಭಕ್ತರಿಗುಣಬಡಿಸಿದಂಥವರಿಗೆ ।
ಷಡುರಸಾನ್ನವೇ ಸಾಕ್ಷಿ ॥ ಪ ॥

ಅನ್ನದಾನ ಮಾಡಿದ ಮನುಜಗೆ—ದಿ- ।
ವ್ಯಾನ್ನವುಂಬುವುದೆ ಸಾಕ್ಷಿ ॥
ಅನ್ನದಾನ ಮಾಡದ ಮನುಜಗೆ—ಪರ- ।
ರನ್ನಕೆ ಬಾಯ್ಬಿಡುವುದೆ ಸಾಕ್ಷಿ ॥ ೧ ॥

ಕನ್ಯಾದಾನ ಮಾಡದ ಮನುಜಗೆ—ಚೆಲ್ವ- ।
ಹೆಣ್ಣಿನ ಭೋಗವೆ ಸಾಕ್ಷಿ ॥
ಕನ್ಯಾದಾನ ಮಾಡದ ಮನುಜಗೆ—ಪರ- ।
ಹೆಣ್ಣಿನ ಹೋರಾಟವೆ ಸಾಕ್ಷಿ ॥ ೨ ॥

ಪರರಿಗೊಂದು ತಾನೊಂದುಂಬುವರಿಗೆ ।
ಜ್ವರ-ಗುಲ್ಮ ರೋಗವೆ ಸಾಕ್ಷಿ ॥
ಪರಿಪರಿ ವಿಧದಿಂದ ಹಿರಿಯರ ದೂರುವಗೆ ।
ತಿರಿದು ತಿಂಬುವುದೆ ಸಾಕ್ಷಿ ॥ ೩ ॥

ಕಂಡ ಪುರುಷಗೆ ಕಣ್ಣಿಡುವ ಸತಿಯು—ತನ್ನ- ।
ಗಂಡನ ಕಳೆವುದೆ ಸಾಕ್ಷಿ ॥
ಪುಂಡತನದಿ ಪರ ಪೆಂಗಳನಳುಪುವಗೆ ।
ಹೆಂಡಿರು ಕಳೆವುದೆ ಸಾಕ್ಷಿ ॥ ೪ ॥

---

೧. ಕ. ವಿ. ವಿ. ತಾಳೆಗರಿ ([illegible]) ಪ್ರತಿಯಿಂದ ತೆಗೆದುಕೊಂಡಿದೆ.

ಕ್ಷೇತ್ರದಾನವ ಮಾಡಿದ ಮನುಜಗೆ—ಏಕ- ।
ಛತ್ರದ ರಾಜ್ಯವೆ ಸಾಕ್ಷಿ ॥
ಮುಕ್ತಿ ಪಡೆಯೆ ತಿಳಿ ಪುರಂದರವಿಠಲನ ।
ಭಕ್ತನಾಗುವುದೆ ಸಾಕ್ಷಿ ॥ ೫ ॥

೧೨೯

ಉಗಾಭೋಗ

೧ ಸುಖವಾದಡೆ ಎನ್ನಿಂದಾಯಿತೆಂಬರು ।
ದುಃಖವಾದರೆ ದೈವಮಾಡಿತೆಂಬರು ।
ಸುಖಕೆ ತಾನಾರೊ ದುಃಖಕೆ ತಾನಾರೊ ।
ವಿಕಲನಾಗಿ ಕೆಡಬೇಡ ಮನುಜಾ ।
ರುಕುಮಿಣಿಯರಸು ಪುರಂದರವಿಠಲ ತಾನೇ ।
ಸುಖ-ದುಃಖವ ಮಾಡಿಸುವನು ಕಾಣಿರೋ ॥

೧೩೦

ರಾಗ—ಶಂಕರಾಭರಣ ತಾಳ—ಆದಿ

೨ ಇರಲೇ ಬಾರದು—ಇಂಥಲ್ಲಿ ।
ಇರಲೇ ಬಾರದು ॥ ಪ ॥

ಇರಬಾರದಿದ..........ವರೆ ಭಯವರೆ ।
ಹರಿ ತಾ ಪರಿಹರಿಸುವ ॥ ಅ ಪ ॥

---

೧ ಇ (೧೩) ಪ್ರತಿಯಿಂದ ತೆಗೆದುಕೊಂಡಿದೆ.
೨ ಅ (ಬಿಡಿ ೫) ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

ದುರುಳಜನಸಹವಾಸದಲ್ಲಿ ದುಷ್ಟಮೃಗವಿದ್ದಡವಿಯಲ್ಲಿ ।
ಉರಗಗಳು ಸೇರಿಕೊಂಡ ಸದನಗಳಲ್ಲಿ ॥
ಕರುಬರಿದ್ದ ಊರುಗಳಲಿ ಕಲಹ ಹೆಚ್ಚಿದ ರಾಜ್ಯದಲ್ಲಿ ।
ಪರಹಿಂಸೆಯ ಮಾಡಲಂಜದ ಪಾಪಿಗಳಿದ್ದಲ್ಲಿ ॥ ೧ ॥

ಅವಿವೇಕದ ಪ್ರಭುಸೇವೆಯಲ್ಲಿ ಆತ್ಮಸೌಖ್ಯವಿಲ್ಲದಲ್ಲಿ ।
ಲವಲೇಶವು ಸದ್ವಿದ್ಯಾ ಮಾತ್ರ ಲಾಭವಿಲ್ಲದಲ್ಲಿ ॥
ನವಯೌವನಭರಿತ ನಾರಿ ತಾನೊಬ್ಬಳಿದ್ದಲ್ಲಿ ।
ಅವನಿಯೊಳಗರ್ಥ ಪ್ರಾಪ್ತಿ ಇಲ್ಲದಂಥಲ್ಲಿ ॥ ೨ ॥

ಮಾನವಿಲ್ಲದ ಸಭೆಯಲ್ಲಿ ಮಾತ ಕದಿವ ನ್ಯಾಯದಲ್ಲಿ ।
ನ್ಯೂನಪೂರ್ಣ ಎನ್ನುವವನ ಉಚ್ಚಕಾಲದಲ್ಲಿ ॥
ಶ್ರೀನಾಥ ಶ್ರೀಪುರಂದರವಿಠಲನ ರೂಪಗಳು ।
ಅನಂತಾನಂತವೆಂದು ಅರಿಯದ ಅವೈಷ್ಣವರಲ್ಲಿ ॥ ೩ ॥

## ೧೩೧

ರಾಗ—ಕಾಂಬೋದಿ ತಾಳ—ಅಟ

೧ ಮಾನಭಂಗವ ಮಾಡಿ ಮೇಲುಪಚಾರವ ।
ಏನ ಮಾಡಿದರಲ್ಲಿ ಇರಬಾರದಯ್ಯ ॥ ಪ ॥

ಕುಂದುಗಳನಾಡಿ ಕುಚೋದ್ಯಗಳನೆ ಮಾಡಿ ।
ಕಂದ ಬಾಯೆಂದು ಬಣ್ಣಿಸಿ ಕರೆಯಲು ॥
ಹಿಂದೆ ಮುಮ್ಮೊಳೆಯಿಟ್ಟು ಮುಂದೆ ಬಣ್ಣಿಸಿ ಕರೆದು ।
ಮುಂದಲೆಯನು ಕೊಯ್ದು ಮುಂಡೆಗೆ ಹೂವ ಮುಡಿಸಿದಂತೆ ॥ ೧ ॥

ನಗೆಗೇಡ ಮಾಡಿ ನಾಲುವರೊಳಗೆ ಕೈಯ ।
ಮುಗಿವೆ ಬಾಯೆಂದು ಬಣ್ಣಿಸಿ ಕರೆಯಲು ॥

೧ ಈ ಕೃತಿಃ ಪ್ರತಿಗಳಿಂದ ಆರಿಸಿಕೊಂಡಿದೆ.

ಮಿಗಿಲಾದ ವಸ್ತ್ರಭೂಷಣವಿತ್ತು ಮನ್ನಿಸಲು ।
ತುದಿ ಮೂಗ ಕೊಯ್ದು ಚಿನ್ನದ ಮೂಗಸಿಟ್ಟಂತೆ ॥ ೨ ॥

ಅರ್ಥ ಹೋದರು ಪ್ರಾಣ ಹೋದರೂ ಮಾನ ।
ವ್ಯರ್ಥವಾಗದ ಹಾಗೆ ಕಾಯಬೇಕು ॥
ಕರ್ತೃ ಶ್ರೀಹರಿ ನಮ್ಮ ಪುರಂದರವಿಠಲನ ।
ಭಕ್ತರಿಲ್ಲದ ಸ್ಥಳ ಬಿಡಬೇಕು ಹರಿಯೆ ॥ ೩ ॥

೧೩೨

ರಾಗ—ನಾದನಾಮಕ್ರಿಯ ತಾಳ—ಆದಿ

೧ ನಿಂದಕರಿರಬೇಕಿರಬೇಕು ।
ಹಂದಿಯಿದ್ದರೆ ಕೇರಿ ಹೇಗೆ ಶುದ್ಧಿಯೊ ಹಾಗೆ ॥ ಪ ॥

ಅಂದಂದು ಮಾಡಿದ ಪಾಪವೆಂಬ ಮಲ ।
ತಿಂದು ಹೋಗುವರಯ್ಯ ನಿಂದಕರು ॥
ವಂದಿಸಿ ಸ್ತುತಿಸುವ ಜನರೆಲ್ಲರು ನಮ್ಮ ।
ಪೊಂದಿಹ ಪುಣ್ಯವನೊಯ್ಯುವರಯ್ಯ ॥ ೧ ॥

ದುಷ್ಟ ಜನರು ಈ ಸೃಷ್ಟಿಯೊಳಿದ್ದರೆ ।
ಶಿಷ್ಟಜನರಿಗೆಲ್ಲ ಕೀರ್ತಿಗಳು ॥
ಇಷ್ಟಪ್ರದ ಶ್ರೀಕೃಷ್ಣನೆ ಸಿನ್ನೊಳು ।
ಇಷ್ಟೇ ವರವನು ಬೇಡುವೆನಯ್ಯ ॥ ೨ ॥

ದುರುಳ ಜನಂಗಳು ಚಿರಕಾಲ ಇರುವಂತೆ ।
ಕರವ ಮುಗಿದು ವರ ಬೇಡುವೆನು ॥
ಪರಿಪರಿ ತಮಸಿಗೆ ಗುರಿಯಹರಲ್ಲದೆ ।
ಪರಮ ದಯಾನಿಧೆ ಪುರಂದರವಿಠಲ ॥ ೩ ॥

೧ ಝು (೧೦) ಪ್ರತಿಯೊಂದರಿಂದ ತೆಗೆದುಕೊಂಡಿದೆ.

## ೧೩೩

ರಾಗ—ಕಾಂಬೋದಿ ತಾಳ—ಅಟ

೧ ತುದಿನಾಲಗೆ ಬೆಲ್ಲ ಎದೆಗತ್ತರಿಯುವರ ಸಂಗ ಬೇಡ ।
ಹೃದಯ ದಾಕ್ಷಿಣ್ಯವನರಿಯದ ಮನುಜರ ಪ್ರಸಂಗ ಬೇಡ ॥ಪ॥

ಮುಂದೆ ಭಲಾ ಎಂದು ಹಿಂದಾಡಿಕೊಂಬರ ಸಂಗ ಬೇಡ ।
ಕುಂದು-ನಿಂದೆಗಳ ಪ್ರಯೋಗ ಮಾಡುವರ ಪ್ರಸಂಗ ಬೇಡ ॥೧॥

ಆಡಿ ಅಳುಕದ ಅಜ್ಞಾನಿ ಮನುಜರ ಸಂಗ ಬೇಡ ।
ಕೂಡಿ ಕುಮಂತ್ರವ ಎಣಿಸುವ ನರರ ಪ್ರಸಂಗ ಬೇಡ ॥ ೨ ॥

ವಿನಯ-ವಿವೇಕವಿಲ್ಲದ ವಿದ್ವಾಂಸರ ಸಂಗಬೇಡ ।
ತನಗಲ್ಲದ ಬಂಟ-ನಂಟ-ಮಿತ್ರಂಗಳ ಸಂಗ ಬೇಡ ॥ ೩ ॥

ತಮ್ಮ ಕಾರ್ಯಕಾಗಿ ಪರರ ಕೆಡಿಸುವರ ಸಂಗ ಬೇಡ ।
ನಮ್ಮ ಪುರಂದರವಿಟ್ಠಲನಿರಲನ್ಯ ಪ್ರಸಂಗ ಬೇಡ ॥ ೪ ॥

## ೧೩೪

ರಾಗ—ಮೋಹನ ತಾಳ—ತ್ರಿಪುಟ

೨ ಏನೇನ ಮಾಡಿದರೇನು ಫಲವಯ್ಯ ।
ಭಾನುಕೋಟಿತೇಜ ಶ್ರೀನಿವಾಸನ ಭಜಿಸದೆ ॥ ಪ ॥

ಹಲವು ಓದಿದರೇನು ಹಲವು ಕೇಳಿದರೇನು ।
ಜಲದೊಳು ಮುಳುಗಿ ಕಾಳಿತಿದ್ದರೇನು ॥

೧ ಅ (ಬಿ ೩ ೫) ಪ್ರತಿಯಲ್ಲಿ ಪಾಠ್ಯೇ ನುಡಿಗಳಿವೆ.
೨ ಓ ಪ್ರತಿಯಿಂದ ತೆಗೆದುಕೊಂಡಿದೆ.

ಛಲದಿಂದ ಮುಸುಕಿಟ್ಟು ಬೆರಳನೆಣಿಸಿದರೇನು ।
ಚೆಲುವ ದೇವನೊಳು ಎರಕವಿಲ್ಲದನಕ ॥ ೧ ॥

ಅನ್ನ ಜರೆದು ಅರಣ್ಯಚರಿಸಿದರೇನು ।
ಉನ್ನತ ವ್ರತಗಳಾಚರಿಸಿದರೇನು ॥
ಚೆನ್ನೆಗಾತಿಯು ಸಂಗ ಬಿಟ್ಟು ಇದ್ದರೇನು ।
ಗಾನಲೋಲನಲಿ ಎರಕವಿಲ್ಲದನಕ ॥ ೨ ॥

ಬತ್ತಲೆ ತಿರುಗಿ ಅವಧೂತನೆನಿಸಿದರೇನು ।
ತತ್ತ್ವವಾಕ್ಯಂಗಳ ಪೇಳಿದರೇನು ॥
ಚಿತ್ತಜನಯ್ಯ ಶ್ರೀಪುರಂದರವಿಠಲನ ।
ಚಿತ್ತದೊಳಿರಿಸಿ ಒಲಿಸಿಕೊಳ್ಳದನಕ ॥ ೩ ॥

## ೨ ಉಗ್ಗಡಣೆ

### ೧೩೫

ರಾಗ—ಶಂಕರಾಭರಣ ತಾಳ—ರೂಪಕ

೧ ನಗೆಯು ಬರುತಿದೆ—ಎನಗೆ ।
ನಗೆಯು ಬರುತಿದೆ ॥ ಪ ॥

ಜಗದೊಳಿದ್ದ ಮನುಜರೆಲ್ಲ ।
ಹಗರಣ ಮಾಡುವುದ ನೋಡಿ ॥ ಅ ಪ ॥

ಪರಸತಿಯರ ಒಲುಮೆಗೊಲಿದು ।
ಹರುಷದಿಂದ ಅವರ ಬೆರೆದು ॥
ಹರಿವ ನೀರಿನೊಳಗೆ ಮುಳುಗಿ ।
ಬೆರಳನೆಣಿಸುವವರ ಕಂಡು ॥ ೧ ॥

---

೧ ಅ (೧) ಆ (II) ಉ ೧ ಝ (೧–೧೦) ಪ್ರತಿಗಳಿಂದ ಆರಿಸಿದೆ.

ಪತಿಯ ಸೇವೆ ಬಿಟ್ಟು ಪರ- ।
ಪತಿಯ ಕೂಡೆ ಸರಸವಾಡಿ ॥
ಸತತ ವ್ರೈಯ ತೊಳೆದು ಹಲವು ।
ವ್ರತವ ಮಾಡುವವರ ಕಂಡು ॥ ೨ ॥

೧ ಹೀನಗುಣವ ಮನದೊಳಿಟ್ಟು ।
ತಾನು ವಿಷದ ಪುಂಜನಾಗಿ ॥
ಮೌನಿ ಪುರಂದರವಿಠಲನ ।
ಧ್ಯಾನಮಾಡುವವರ ಕಂಡು ॥ ೩ ॥

## ೧೩೭

ರಾಗ—ರೇಗುಪ್ತಿ                                        ತಾಳ—ಅಟ

೨ ಕೆಟ್ಟಿತು ಕೆಲಸವೆಲ್ಲ—ಲೋಕದಿ ಕಾಮ- ।
ನಟ್ಟುಳಿ ಘನವಾಯಿತು ॥ ಪ ॥
ಬಟ್ಟೆ ತಪ್ಪಿ ಮುಂದೆ ಕೆಟ್ಟು ಕರ್ಮಿಯಾಗಿ ।
ಬಿಟ್ಟು ಮುಂದಣ ಪಥವ—ಹೇ ದೇವಾ ॥ ಅ ಪ ॥

ಸತ್ಯ ಶೌಚ ಕರ್ಮವು ಧರ್ಮದ ಬಲ ।
ಮತ್ತೆ ಅಡಗಿಹೋಯಿತು ॥
ಎತ್ತ ನೋಡಲು ನೀಚವೃತ್ತಿಯೆ ತುಂಬಿ ।
ಅತ್ಯಂತ ಪ್ರಬಲಾವಾಯ್ತೋ ಹೇ ದೇವ ॥ ೧ ॥

೧ ಆ (II) ಪ್ರತಿಯಲ್ಲಿ ಕೆಳಗೆ ಕಾಣಿಸಿದ ಹೆಚ್ಚಿನ ನುಡಿಯಿದೆ.
ಕಾಮ-ಕ್ರೋಧ ಮನದೊಳಿಟ್ಟು ।
ತಾಮಸದೊಳ್ಮಗ್ನರಾಗಿ ॥
ಸ್ವಾಮಿ ಪುರಂದರವಿಠಲನ ।
ನಾಮ ನೆನೆಯದವರ ಕಂಡು ॥
೨ ಓ ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

ಹೊತ್ತುಹೊತ್ತಿಗೆ ಹಲವು ಲಂಪಟತನದಲಿ ।
ಚಿತ್ತ ಚಂಚಲವಾಯಿತು ॥
ಸತ್ತು ಹುಟ್ಟುವ ಸುಳಿಯಲ್ಲದೆ ಮತ್ತೊಂದು ।
ಗೊತ್ತು ಇಲ್ಲದೆ ಹೋಯಿತೋ—ಹೇ ದೇವ ॥ ೨ ॥

ಪೇಳುವುದೇನಿನ್ನು ದುರ್ಜನರ ಸಂಗ- ।
ದೋಲಾಟ ಸೊಗಸಾಯಿತು ॥
ಕೀಳು-ಮೇಲು, ಮೇಲು-ಕೀಳಾಗಿ ನಡೆಯುವ ।
ಕಾಲ ವೆಗ್ಗಳವಾಯಿತೋ—ಹೇ ದೇವ ॥ ೩ ॥

ಆಳುವ ಅರಸರಿಗೆಲ್ಲ ಕಾಂಚನದಾಸೆ ।
ಮೇಲು-ಮೇಲಾಯಿತಯ್ಯ ॥
ನೀಲಮೇಘಶ್ಯಾಮ ನಿನ್ನಾಳೆಂಬವರಿಗೆ ।
ಕೂಳು ಹುಟ್ಟದೆ ಹೋಯಿತೋ—ಹೇ ದೇವ ॥ ೪ ॥

ಅರಿ ಷಡ್ವರ್ಗದಲಿ ಸಿಲುಕಿ ಸುಜ್ಞಾನದ ।
ಅರಿವು ಇಲ್ಲದೆ ಹೋಯಿತು ॥
ಕರುಣಾಳು ಶ್ರೀಪುರಂದರವಿಠಲನೆ ನಿನ್ನ ।
ಸ್ಮರಣೆಯಿಲ್ಲದೆ ಹೋಯಿತೋ—ಹೇ ದೇವ ॥ ೫ ॥

## ೧೩೭

ರಾಗ—ಹಿಂದೋಳ ತಾಳ—ಆದಿ

೧ ನೀಚ ಮಾನವರಿಗೆ ಸಿರಿ ಬಂದರೇನು ।
ಈಚಲ ಮರ ದಟ್ಟ ನೆರಳಾದರೇನು ? ॥ ಪ ॥

ನಾಚಿಕಿಲ್ಲದ ನರರು ಬಾಳಿದರೇನು ।
ಹೀಚಿನೊಳಿಹ ಫಲ ಹಣ್ಣಾದರೇನು ? ॥ ಅ ಪ ॥

೧ ಅ (ಬಿಡಿ ೫) ಆ I, ಪ್ರತಿಗಳಿಂದ ಆರಿಸಿಕೊಂಡಿದೆ.

ಹೊಲೆಯರೊಳು ಪದುಮಿನಿ ಹೆಣ್ಣು ಹುಟ್ಟಿದರೇನು ।
ಮೊಲೆಯ ತೊರೆಯದ ನಾಯಿ ಈದರೇನು ॥
ಕಳೆಹೀನ ಕಾಮಿನಿಗೆ ಕಾಂತಿ ಹೆಚ್ಚಿದರೇನು ।
ಬಿಲದೊಳಗಿನ ಸರ್ಪ ಹೆಡೆಯುಚ್ಚಲೇನು ? ॥ ೧ ॥

ಕೋತಿಯ ಮೈಯೊಳು ಖಂಡ ತುಳುಕಲೇನು ।
ಹೋತಿನ ಗಡ್ಡವು ಹಿರಿದಾದರೇನು ॥
ಜಾತಿಗೆ ಬಾರದ ಬದುಕು ಬಾಳಿದರೇನು ।
ರೀತಿಯಿಲ್ಲದ ನೆರೆಯ ಸ್ನೇಹವಿನ್ನೇನು ? ॥ ೨ ॥

ರಕ್ಷಣೆಯಿಲ್ಲದ ರಾಜ ರಾಜಿಸಲೇನು ।
ಭಿಕ್ಷೆ ಹುಟ್ಟದ ಊರು ತುಂಬಿದ್ದರೇನು ॥
ಲಕ್ಷ್ಯವಿಲ್ಲದವಗೆ ಲಕ್ಷ್ಯ ಬಂದರೇನು ।
ಪಕ್ಷಪಾತವಿಲ್ಲದವನ ಆಶ್ರಯವಿನ್ನೇನು ? ॥ ೩ ॥

ಫಣಿಯ ಮಸ್ತಕದ ಮೇಲೆ ಮಣಿಯು ಮಿಂಚಲೇನು ।
ಉಣಿಸಿ-ದಣಿಸದ ಧಣಿಯಿದ್ದರೇನು ॥
ಋಣಗೇಡಿ ಮಕ್ಕಳ ರಟ್ಟೆ ಬಲಿತರೇನು ।
ಕ್ಷಣಚಿತ್ತವಿಲ್ಲದವನ ಸ್ಮರಣೆಯು ಇನ್ನೇನು ? ॥ ೪ ॥

ಸಾಕಲಾರದಾತನ ಸತಿಮೋಹವೇನು ।
ಜೋಕೆಮಾಡದಾ ಹಣ ಗಳಿಸಿದರೇನು ॥
ಕಾಕಃಮಾನವರ ಸೇವೆ ಮಾಡಿದರೇನು ।
ಜೋಕೆಂದು ಭಜಿಸಿರೊ ಪುರಂದರವಿಠಲನ ॥ ೫ ॥

## ೧೫೮

ರಾಗ—ಕಾಂಬೋದಿ ತಾಳ—ಅಟ

೧ ಪಾಪಿಗೇತಕೆ ಪರಮತತ್ತ್ವಬೋಧ ।
ಕೋಪಿಗೇತಕೆ ಸುಗುಣ-ಶಾಂತಬುದ್ಧಿ ॥ ಪ ॥

ಹಂದಿಗೆ ಗಂಧವೇಕೆ ಅಂಧಗೆ ಕನ್ನಡಿಯೇಕೆ ।
ಮಂದಮತಿ ಮನುಜರಿಗೆ ಮಂತ್ರವೇಕೆ ॥
ತಂದೆ-ತಾಯಂದಿರಿಗೆ ಕುಂದು ತರುವ ಮಗಳೇಕೆ ।
ನಿಂದು ವಾದಿಸುವಂಥ ಸತಿಯು ತಾನೇಕೆ? ॥ ೧ ॥

ಕತ್ತೆಗಮೃತವೇಕೆ ಎತ್ತಿಗೆ ಕರೆಹವೇಕೆ ।
ತೊತ್ತಿಗೆ ಛತ್ರದ ನೆರಳೇತಕೆ ॥
ಕುತ್ತಿಗೆ ಕೊಯ್ಯುವನ ಸೊಗಸುಮಾತುಗಳೇಕೆ ।
ಸತ್ಯವಿಲ್ಲದೆ ನುಡಿವ ಯೋಗಿಯೇಕೆ? ॥ ೨ ॥

ಷಂಡಗೆ ಹೆಂಡತಿಯೇಕೆ ತೊಂಡರಿಗೆ ಖಂಡೆಯವೇಕೆ ।
ಮಂಡೆಬೋಳಿಗೆ ಮುತ್ತಿನ ದಂಡೆಯೇಕೆ ॥
ಮಂಡಲದೊಳಗೆ ಶ್ರೀಪುರಂದರವಿಠಲನ ।
ಕಂಡು ಭಜಿಸದ ಮನುಜರಿದ್ದೇತಕೆ? ॥ ೩ ॥

## ೧೫೯

ರಾಗ—ಮೋಹನ ತಾಳ—ಝಂಪೆ

೨ ಪಾಪಿ ಬಲ್ಲನೆ ಪರರ ಸುಖ-ದುಃಖದಿಂಗಿತವ ।
ಕೋಪಿ ಬಲ್ಲನೆ ದಯಾದಾಕ್ಷಿಣ್ಯವ ॥ ಪ ॥

---

೧ ಅ (ಬಿಡಿ ೩) ಪ್ರತಿಯೊಂದರಲ್ಲಿಯೆ ಇದೆ.

೨ ಕ. ವಿ. ವಿ. ತಾಳೆಗರಿ (೧೮೫೮–೧೭೫೦) ಪ್ರತಿಯಿಂದ ತೆಗೆದುಕೊಂಡಿದೆ. ಓ ಮತ್ತು ಖ ಪ್ರತಿಗಳಲ್ಲಿ ಎರಡು ನುಡಿಗಳು ಹೆಚ್ಚಾಗಿವೆ.

ಬಾಳೆಬಲ್ಲುದೆ ಮರಳಿ ಫಲವಾಗೊ ಸುದ್ದಿಯನು । (೧)
ಕಾಗೆ ಬಲ್ಲುದೆ ಒಳ್ಳೆ ಕೋಗಿಲೆಯ ಸ್ವರವನು ॥ (೨)

ಹೇನು ಬಲ್ಲುದೆ ಮುಡಿದ ಹೂವಿನಾ ಪರಿಮಳವ ।
ಶ್ವಾನ ಬಲ್ಲುದೆ ರಾಗಭೇದಂಗಳ ॥
ಮೀನು ಬಲ್ಲುದೆ ನೀರು ಚವುಳು-ಸವಿಯೆಂಬುದನು ।
೧ ಹೀನ ಬಲ್ಲನೆ ತನಗೆ ಉಪಕಾರ ಮಾಡಿದುದ? ॥ ೧ ॥

ಕತ್ತೆ ಬಲ್ಲುದೆ ತಾನು ಹೊತ್ತಿರುವ ನಿಧಿಯನ್ನು ।
ಮೃತ್ಯು ಬಲ್ಲುದೆ ದಯಾ-ದಾಕ್ಷಿಣ್ಯವ ॥
ತೊತ್ತು ಬಲ್ಲಳೆ ಹೀನ-ಮಾನದಭಿಮಾನವನು ।
ಮತ್ತೆ ಬಲ್ಲುದೆ ಬೆಕ್ಕು ಮನೆಯ ಮೀಸಲನು? ॥ ೨ ॥

ಹೇಡಿ ತಾ ಬಲ್ಲನೇ ರಣರಂಗ ಧೀರವನು ।
ಕೋಡಗವು ಬಲ್ಲುದೇ ರತ್ನದಾಭರಣ ॥
ಬೇಡಿದುದನೀವ ಪುರಂದರವಿಠಲನಲ್ಲದೆ ।
ನಾಡದೈವಗಳೆಲ್ಲ ಕೊಡಬಲ್ಲುವೇ? ॥ ೩ ॥

## ೧೪೦

ರಾಗ—ಮುಖಾರಿ ತಾಳ—ಝಂಪೆ

೨ ಮೂಢ ಬಲ್ಲನೆ ಜ್ಞಾನ-ದೃಢಭಕುತಿಯ? ।
ಕಾಡ ಕಪಿ ಬಲ್ಲುದೇ ಮಾಣಿಕದ ಬೆಲೆಯ? ॥ ಪ ॥

ಕೋಣ ಬಲ್ಲುದೆ ವೇದಗಳನೋದಿ ಪಠಿಸಲಿಕೆ ।
ಗೋಣಿ ಬಲ್ಲುದೆ ಎತ್ತಿನಾ ದುಃಖವ ॥
ಪ್ರಾಣತೊಲಗಿದ ಹೆಣವು ಕಿಚ್ಚಿಗಂಜಬಲ್ಲುದೆ ।
ಕ್ಷೋಣಿಯೊಳು ಕುರುಡ ಬಲ್ಲನೆ ಹಗಲು-ಇರುಳ? ॥ ೧ ॥

೧ ತಾನು ಬಲ್ಲುದೆ ಹಾವು ಹಾಲನೆರೆದವನ (ಖ).
೨ ಝಾ ( [illegible] ೦) ಜ್ಞ ಕ (೨) ಪ್ರತಿಗಳಿಂದ [illegible]ಕೊಂಡಿದೆ.

ಬಧಿರ ಕೇಳುವನೆ ಸಂಗೀತವನು ಪಾಡಿದರೆ ? ।
ಚದುರ ಮಾತುಗಳಾಡುವನೆ ಮೂಕನು ? ॥
ಕ್ಷುಧೆಯಿಲ್ಲದವನು ಅಮೃತಾನ್ನವನು ಸವಿಯುವನೆ ? ।
ಮಧುರವಚನವ ನುಡಿವನೇ ದುಷ್ಟಮನುಜ ? ॥ ೨ ॥

ಅಜ ಬರೆದ ಬರಹವನು ತೊಡೆಯಬಲ್ಲನೆ ಜಾಣ ? ।
ನಿಜಭಕುತಿ ಮುಕುತಿಸುಖವನ್ನು ಕೊಡುವ ॥
ಭುಜಗೇಂದ್ರಶಯನ ಶ್ರೀಪುರಂದರವಿಟ್ಠಲನ ।
ಭಜಿಸಲಿಕ್ಕರಿಯದವ ಕೆಡು ಪಾಪಿ ಮನುಜ ॥ ೩ ॥

೧೪೧

ರಾಗ—ಮಧ್ಯಮಾವತಿ ತಾಳ—ಆದಿ

೧ ಬೇವ ಬೆಲ್ಲದೊಳಿಡಲೇನು ಫಲ ।
ಹಾವಿಗೆ ಹಾಲೆರೆದೇನು ಫಲ ? ॥ ಪ ॥

ಕುಟಿಲವ ಬಿಡದಲೆ ಕುಜನರು ಮಂತ್ರವ ।
ಪಠನೆಯ ಮಾಡಿದರೇನು ಫಲ ? ॥
ಸಟೆಯನ್ನಾಡುವ ಮನುಜರು ಮನದಲಿ ।
ವಿಠಲನ ನೆನೆದರೆ ಏನು ಫಲ ? ॥ ೧ ॥

ಮಾತಾ-ಪಿತೃಗಳ ಬಳಲಿಸುವಾತನು ।
ಯಾತ್ರೆಯ ಮಾಡಿದರೇನು ಫಲ ? ॥
ಘಾತಕತನವನು ಬಿಡದೆ ನಿರಂತರ ।
ನೀತಿಯನೋದಿದರೇನು ಫಲ ? ॥ ೨ ॥

---

೧ ಅ (೧೧) ಆ (vi) ಖ ೧ (೭) ಜ್ಞ ಶ್ರೀ ಪ್ರತಿಗಳಿಂದ ಆರಿಸಿದೆ.



ಬೇಲೂರು ಶ್ರೀ ಚೆನ್ನಕೇಶವ ಮೂರ್ತಿ

ಕಪಟತನದಲಿ—ಕಾಡುವರೆಲ್ಲರು ।
ಜಪಗಳ ಮಾಡಿದರೇನು ಫಲ ? ॥
ಕುಪಿತಬುದ್ಧಿಯನು ಬಿಡದೆ ನಿರಂತರ ।
ಉಪವಾಸ ಮಾಡಿದರೇನು ಫಲ ? ॥ ೩ ॥

ಪತಿಗಳ ನಿಂದಿಸಿ ಬೊಗಳುವ ಸತಿಯರು ।
ವ್ರತಗಳ ಮಾಡಿದರೇನು ಫಲ ? ॥
ಅತಿಥಿಗಳೆಡೆಯಲಿ ಭೇದವ ಮಾಡಿ ಸ- ।
ದ್ಗತಿಯನು ಬಯಸಿದರೇನು ಫಲ ? ॥ ೪ ॥

ಹೀನ ಗುಣಂಗಳ ಬಿಡದೆ ನದಿಯೊಳು ।
ಸ್ನಾನವ ಮಾಡಿದರೇನು ಫಲ ? ॥
ಜ್ಞಾನಿ ಪುರಂದರವಿಠಲನ ನೆನೆಯದೆ ।
ಮೌನವ ಮಾಡಿದರೇನು ಫಲ ? ॥ ೫ ॥

## ೧೪೨

ರಾಗ—ಮುಖಾರಿ ತಾಳ—ಝಂಪೆ

೧ ಹಂಚು ಬಲ್ಲುದೆ ಹಲ್ಲ ತೆಗೆದರಪಕಾರವನು ।
ಮಿಂಚುಳ್ಳ ಕಂಚು-ಕನ್ನಡಿಯಲ್ಲದೆ ॥ ಪ ॥

ಕಳ್ಳ ಬಲ್ಲನೆ ತನ್ನ ಕರುಣದುಪಕಾರವನು ? ।
ಕೊಳ್ಳಿ ಬಲ್ಲುದೆ ತನ್ನ ಮನೆಯೆಂಬುದ ? ॥
ಸುಳ್ಳ ಬಲ್ಲನೆ ಗ್ರಾಮದೊಳಗಣಾ ಸುದ್ದಿಯನು ? ।
ಬಳ್ಳಿಬಲೆ ಬಲ್ಲುದೇ ತನ್ನ ವನವೆಂಬುದನು ? ॥ ೧ ॥

---

೧ ಕ. ವಿ. ವಿ. ತಾಳೆಗರಿ (೨೨೪೯-೧೭೦೦) ಪ್ರತಿಯಿಂದ ಹಾಗು ಶ್ರೀ ಪ್ರತಿಯಿಂದ ಆರಿಸಿದೆ.

ಇದರ ನಾಲ್ಕನೆಯ ನುಡಿ ಸಿಕ್ಕುವುದಿಲ್ಲ.

ಬಾಳೆ ಬಲ್ಲುದೆ ತಾನು ಮೇಲೋಗೆವ ಫಲಗಳನು ? ।
ಸೂಳೆ ಬಲ್ಲಳೆ ಮನೆಯ ಬಡತನಗಳ ? ॥
ಖೂಳ ಬಲ್ಲನೆ ಜಾಣರೊಳಗೊಂದು ಸವಿನುಡಿಯ ? ।
ಕೇಳಬಲ್ಲನೆ ಕಿವುಡ ಏಕಾಂತವ ? ॥ ೨ ॥

ಯೋಗಿ ಬಲ್ಲನೆ ಭೋಗದೊಳಗಣಾ ಸುದ್ದಿಯನು ? ।
ಭೋಗಿ ಬಲ್ಲನೆ ಕೆಲಸ-ಉದ್ಯೋಗವ ? ॥
ಕಾಗೆ ಬಲ್ಲುದೆ ಕೋಗಿಲಂತೆ ಸ್ವರಗೈವುದನು ? ।
ಗೂಗೆ ಬಲ್ಲುದೆ ಹಗಲ ಹರಿದಾಟವ ? ॥ ೩ ॥

ಕೋಣ ಬಲ್ಲುದೆ ಕುದುರೆಯಂತೆ ವೈಹಾಳಿಯನು ? ।
ಕಾಣಬಲ್ಲನೆ ಕುರುಡ ಕನ್ನಡಿಯನು ? ॥
ದೀನವತ್ಸಲ ನಮ್ಮ ಪುರಂದರವಿಠಲನನು ।
ಕಾಣಬಲ್ಲನೆ ಜ್ಞಾನವಿಲ್ಲದವನು ? ॥ ೪ ॥

## ೧೪೩

ರಾಗ—ಶಂಕರಾಭರಣ (ಕಾಂಬೋದಿ) ತಾಳ—ಅಟ

೧ ಬಾತೆಗೆ ಬಾರದ ವಸ್ತು ಬಹಳಿದ್ದರೇನು ।
ಹೋತಿನ ಕೊರಳೊಳಗೆ ಮೊಲೆಯಿದ್ದರೇನು ? ॥ ಪ ॥

ತಾನು ಉಣ್ಣದ ದ್ರವ್ಯ ತಾಳೆಯುದ್ದ ಇದ್ದರೇನು ।
ದಾನವಿಲ್ಲದ ಮನೆಯು ದೊಡ್ಡದಾದರೇನು ? ॥
ಹೀನ ಕುಲದವನಿಗೆ ಹಿರಿತನ ಬಂದರೇನು ।
ಶ್ವಾನನ ಮೊಲೆಯೊಳು ಹಾಲಿದ್ದರೇನು ? ॥ ೧ ॥

ವಾದಿಸುವ ಮಗನು ಒಯ್ಯಾರದಲಿದ್ದರೇನು ।
ಕಾದುವ ಸತಿ ಕೆಲದೊಳಿದ್ದರೇನು ? ॥

೧ ಅ (೧) ಆ (II) ಝ (೧-೨೦) ಈ ಪ್ರತಿಗಳಿಂದ ಆರಿಸಿದೆ.

ಕ್ರೋಧವನು ಅಳಿಯದ ಸೋದರನು ಇದ್ದರೇನು ।
ಮಾದಿಗರ ಮನೆಯಲಿ ಮದುವೆ ಆದರೇನು ? ॥ ೨ ॥

ಹೋಗದೂರಿನ ಹಾದಿ ಕೇಳಿ ಮಾಡುವುದೇನು ।
೧ ಮೂಗನ ಕೂಡ ಏಕಾಂತವಿನ್ನೇನು ? ॥
ಯೋಗಿ ಶ್ರೀಪುರಂದರವಿಠಲನ ನೆನೆಯದವ ।
ಯೋಗಿಯಾದರೆ ಏನು ಜೋಗಿಯಾದರೆ ಏನು ? ॥ ೩ ॥

## ೧೪೪

ರಾಗ—ನಾದನಾಮಕ್ರಿಯ ತಾಳ—ಆದಿ

೨ ಹಂಚಿನ ಇದಿರಲಿ ಹಲ್ಲನು ತೆಗೆಯಲು ।
ಮಿಂಚುವ ಕನ್ನಡಿಯಾದೀತೆ ? ॥ ಪ ॥

ಮಿಂಚಿನ ಬೆಳಕಲಿ ದಾರಿಯ ನಡೆದರೆ ।
ಮುಂಚುವ ಊರಿಗೆ ಮುಟ್ಟೀತೆ ? ॥ ಅ ಪ ॥

ಬಾಲರ ಭಾಷೆಯ ನಂಬಿ ನಡೆದರೆ ।
ಶೀಲದ ಕೆಲಸಗಳಾದೀತೆ ? ॥
ಜೋಲುವ ಹೋತಿನ ಮೊಲೆಗಳ ಹಿಂಡಲು ।
ಹಾಲಿನ ಹಸಿಯದು ಹೊರಟೀತೆ ? ॥
ಕಾಲುವೆ ಬಚ್ಚಲಕುಣಿ ಸೀರಿಗೆ—ಘನ- ।
ಬಾಳೆಯ ತೋಟವು ಆದೀತೆ ? ॥
ಮೇಲುಬಣ್ಣದಾ ಆಲದ ಹಣ್ಣು ।
ನಾಲಿಗೆಸವಿಯನು ಕೊಟ್ಟೀತೆ ? ॥ ೧ ॥

೧ ಯೋಗಿಯಕೂಡ ಪರಿಹಾಸ್ಯವೇನು (ಬಹುಮತ).
೨ ಝು (ಅ) ಪ್ರತಿಯೊಂದರಲ್ಲಿಯೇ ಇದೆ.

ಭಾಷೆಯ ನುಡಿಗಳಿಗಾಶೆ ಮಾಡೆ ಮನ- ।
ದಾಸೆಯ ಕಾರ್ಯಗಳಾದೀತೆ ? ॥
ದೋಸೆಯ ಛಿದ್ರದಿ ಆರಿಸೆ ಕಾಳಿನ ।
ರಾಶಿಯು ಹಸನವು ಆದೀತೆ ? ॥
ಕಾಸಿ ಕಬ್ಬಿಣವ ಗಟ್ಟಿ ಕೂಡಿಟ್ಟರೆ ।
ಮಾಸದ ಮನೆಬದುಕಾದೀತೆ ? ॥
ಕಾಸಾರದೆದುರಿಗೆ ಹರಿಕಥೆ ಹೇಳ್ದರೆ ।
ಸೋಸಿ ಕೇಳ್ದು ತಲೆದೂಗಿತೆ ? ॥ ೨ ॥

ಮಿಥ್ಯಾವಚಸಿಯ ಮಾತನು ನಂಬಲು ।
ಹೊತ್ತಿಗೆ ಅದು ಬಂದೊದಗೀತೆ ? ॥
ಸತ್ತವನೆದುರಿಗೆ ಸುತ್ತಲು ಕುಳಿತು ।
ಅತ್ತರೆ ಆ ಹೆಣ ಕೇಳೀತೆ ? ॥
ನಿತ್ಯನಪುಂಸಕನೈದಲು ತರುಣಿಗೆ ।
ಚಿತ್ತಸುಖವು ಸೂರಾದೀತೆ ? ॥
ಕುತ್ತಿಗೆಗೊಯ್ಯನ ಕಾಲು ಹಿಡಿದರೆ ।
ಹತ್ಯದೊಳ್ ಹೇಸಿಕೆ ಹುಟ್ಟೀತೆ ? ॥ ೩ ॥

ಬೋರಗಲ್ಲಿನ ಮುಂದೆ ಬಡತನ ಹೇಳಲು ।
ಸಾರಸುಖಕ್ಕನುವಾದೀತೆ ? ॥
ಚೋರನು ಚಂದ್ರಗೆ ಕೈಮುರೆ ಮಾಡಲು ।
ಚೌರ್ಯಕೆ ಕತ್ತಲು ಒದಗೀತೆ ? ॥
ನೀರಿಲ್ಲದ ಕೆರೆಯೊಳಗೆ ಮತ್ಸ್ಯದಾ- ।
ಹಾರಿಗೆ ಮೀನವು ದೊರಕೀತೆ ? ॥
ಕಾರಣವಿಲ್ಲದ ಲೌಕಿಕ ಕಥೆಯಿಂ ।
ಘೋರ ನರಕಭಯ ತಪ್ಪೀತೆ? ॥ ೪ ॥

ಬೆಟ್ಟಕೆ ಕಲ್ಲನು ಹೊತ್ತೊಯ್ದೊಗೆಯಲು ।
ಹೊಟ್ಟೆಗೆ ಓದನ ಸಿಕ್ಕೀತೆ ? ॥
ಹುಟ್ಟುಬಂಜೆಗೆ ಹಡೆಯುವ ವ್ಯಥೆ ಹೇಳಲು ।
ಹೊಟ್ಟೆಯಲಿ ಕಳವಳ ಹುಟ್ಟೀತೆ ? ॥
ಕೆಟ್ಟ ಬಯಸುವರಿಗೆ ಮಿಷ್ಟಾನ್ನವುಣಿಸಲು ।
ಕೆಟ್ಟ ಮಾತು ಅದು ಬಿಟ್ಟೀತೆ ? ॥
ದಿಟ್ಟ ಪುರಂದರವಿಟ್ಠಲರಾಯನ ।
ಬಿಟ್ಟರೆ ಸದ್ಗತಿಯಾದೀತೆ ? ॥ ೫ ॥

## ೧೪೫

ರಾಗ—ಮಾಂಡ ತಾಳ—ಆದಿ

೧ ರಾಮ ಗೋವಿಂದ–ಸೀತಾ–ರಾಮ ಗೋವಿಂದ ॥ ಪ ॥

ತೃಪ್ತಿಯಹುದೆ ಹೆತ್ತ ತಾಯಿ ಇಕ್ಕದನಕ ।
ಭಕ್ತಿಯಹುದೆ ಭಕ್ತಜನರ ಸಲಹದನಕ ॥
ಮುಕ್ತಿಯಹುದೆ ಭಾವಶುದ್ಧಿ ಇಲ್ಲದನಕ ।
ಚಿತ್ತಶುದ್ಧಿ ಆತ್ಮನಿಜವು ತಿಳಿಯದನಕ ॥ ೧ ॥

ಓದಲೇಕೊ ಮನದಿ ಜ್ಞಾನವಿಲ್ಲದನಕ ।
ಭೇದವೇಕೊ ಗತಿಯು ಗಮನ ತಿಳಿಯದನಕ ॥
ಕಾದಲೇಕೊ ಭುಜದಿ ಶಕ್ತಿಯಿಲ್ಲದನಕ ।
ವಾದವೇಕೊ ಶ್ರುತಿ-ಶಾಸ್ತ್ರ ತಿಳಿಯದನಕ ॥ ೨ ॥

ನಳಿನವಿದ್ದರೇನು ತುಂಬಿಯೊದಗದನಕ ।
ದಳವು ಇದ್ದರೇನು ಧೈರ್ಯಗೊಡದನಕ ॥

೧ ಊ (ಕ) ಪ್ರತಿಗಳಿಂದ ಆರಿಸಿಕೊಂಡಿದೆ.

ಲಲನೆಯಿದ್ದರೇನು ಪುತ್ರರಿಲ್ಲದನಕ ।
ಚೆಲುವನಾದರೇನು ವಿದ್ಯೆ ಕಲಿಯದನಕ ॥ ೩ ॥

ವನವಿದ್ದೇಕೊ ಶುಕ-ಪಿಕವಿಲ್ಲದನಕ ।
ತನುವಿದ್ದೇಕೊ ಪರಹಿತಕೆ ಬಾರದನಕ ॥
ಮನೆಯಿದ್ದೇಕೊ ಅತಿಥಿಯೊಬ್ಬರಿಲ್ಲದನಕ ।
ಧನವಿದ್ದರೇನು ದಾನ-ಧರ್ಮಕ್ಕೊದಗದನಕ ॥ ೪ ॥

ಹರಿಯ ಚಿಂತೆಯಿರಲು ಅನ್ಯ ಚಿಂತೆಯೇತಕೊ ।
ಹರಿಯ ಧ್ಯಾನವಿರಲು ಅನ್ಯ ಧ್ಯಾನವೇತಕೊ ॥
ಹರಿಯು ಒಲಿದ ಮನುಜನಿಗೆ ದೈನ್ಯವೇತಕೊ ।
ಸಿರಿಪುರಂದರವಿಠಲನಿರಲು ಭಯವು ಏತಕೊ ? ॥ ೫ ॥

## ೧೪೬

ರಾಗ—ಮಧ್ಯಮಾವತಿ ತಾಳ—ಆದಿ

೧ ಆರ ಹಾರೈಸಿದರೇನುಂಟು—ಬರಿ ।
ನೀರ ಕಡೆದರಲ್ಲೇನುಂಟು ? ॥ ಪ ॥

ಅಂತರವರಿಯದ ಅಧಮನ ಬಾಗಿಲ ।
ನಿಂತು ಕಾಯ್ದರಲ್ಲೇನುಂಟು ॥
ಎಂತಾದರಲ್ಲಿಯು ತಪ್ಪ ಸಾಧಿಸಿ ಯಮ- ।
ನಂತೆ ಕೊಲುವರಲ್ಲೇನುಂಟು ? ॥ ೧ ॥

ಕೊಟ್ಟೆ-ಕೊಟ್ಟೆನೆಂದು ಕೊಡದುಪಚಾರದ ।
ಭ್ರಷ್ಟನ ಸೇರಿದರೇನುಂಟು ॥

೧ ಕ. ವಿ. ವಿ. ತಾಳೆಗರಿ (೧೮೫೮–೧೭೫೦) ಪ್ರತಿಯಿಂದ ತೆಗೆದುಕೊಂಡಿದೆ.
ಆ (ಬಿಡಿ ೫) ಓ ಪ್ರತಿಗಳಲ್ಲಿ ತಪ್ಪುಗಳು ಬಹಳವಾಗಿವೆ.

ಬಿಟ್ಟಿಯ ಮಾಡಿಸಿ ಬೆದರಿಸಿ ಬಿಡುವ ಕ- |
ನಿಷ್ಠನ ಸೇರಿದರೇನುಂಟು ? || ೨ ||

ಪಿಸುಣನ ಕುದುರೆಯು ಮುಂದೋಡಲು ಬಲು |
ಬಿಸಿಲಿನ ಹಣ್ಣಲ್ಲದೇನುಂಟು ||
ವಸುಧೆಯೊಳಗೆ ಪುರಂದರವಿಠಲನನು ಭ- |
ಜಿಸಲು ಮುಕ್ತಿಸಾಧನವುಂಟು || ೩ ||

## ೧೪೭

ರಾಗ—ಕಾಂಬೋದಿ ತಾಳ—ಅಟ

೧ ಏಳಲವ ಮಾಡಿದಲ್ಲಿ ಏನ ಕೊಟ್ಟರೂ ಬೇಡ |
ಕೀಳು ಮನುಜರ ಸಂಗ ಸಾವಿರಕೊಟ್ಟರೂ ಬೇಡ ||ಪ||

ಆಡಿ ತಪ್ಪುವ ನೃಪನ ಆಶೆಮಾಡಲುಬೇಡ |
ಕೂಡಿ ನಡೆಯುವಲ್ಲಿ ಕಪಟ ಬೇಡ ||
ಮೂಢ ಹೆಣ್ಣಿನ ಸಂಗ ಮಮತೆ ಇದ್ದರು ಬೇಡ |
ಮಾಡಿದುಪಕಾರವನು ಮರೆಯಬೇಡ || ೧ ||

ಬಂಧುವರ್ಗದಿ ಬಲು ನಿಂದು ವಾದಿಸಬೇಡ |
ಮಂದಮತಿಯ ಕೂಡ ಮಾತು ಬೇಡ ||
ಬಂದತಿಥಿಗಳಲಿ ಬರಿದೆ ಕೋಪಿಸಬೇಡ |
ಇಂದಿರೇಶನ ಮರೆದು ಜಡನಾಗಬೇಡ || ೨ ||

ಹವಣರಿಯದೆ ಹಗೆಗಳ ಹತ್ತಿಗರೆಯಬೇಡ |
ಜವನ ಭೂಮಿಯಲಿದ್ದು ಜೋಕೆ ಬೇಡ ||
ಭುವನೇಶ ಪುರಂದರವಿಠಲನ ನೆನೆಯದೆ |
ಅವಮತಿಯನಾಗಿ ನೀ ಕೆಡಲುಬೇಡ || ೩ ||

---

೧ ಖ ೧ (ಬಿ ೩ ೬) ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

## ೧೪೮

ರಾಗ—ಪೂರ್ವಿ ತಾಳ—ಝಂಪೆ

೧ ಕಷ್ಟವಾವುದು ಸುಖವದಾವುದಯ್ಯ ॥ ಪ ॥

ಹೊನ್ನುಳ್ಳವಗೆ ಬಂದ ದಾರಿದ್ರ್ಯ ಬಲು ಕಷ್ಟ ।
ಅನ್ಯರ ಮನೆಯ ಸೇರುವುದು ಬಹು ಕಷ್ಟ ॥
ಅನ್ಯಾಯವಿರದೆ ಅಪಕೀರ್ತಿ ಹೊರುವುದು ಕಷ್ಟ ।
ಗನ್ನಘಾತಕವ ಮಾಡುವುದು ಕಷ್ಟವಯ್ಯ ॥ ೧ ॥

ಉದ್ಯೋಗದಲಿ ಒಳ್ಳೆ ಲಾಭವಾದರೆ ಸುಖವು ।
ಬದ್ಧನುಡಿ ನುಡಿಯುವುದು ಬಹಳ ಸುಖವು ॥
ಗುದ್ದಾಟವಿರದಣ್ಣ-ತಮ್ಮರಿದ್ದರೆ ಸುಖವು ।
ಬುದ್ಧಿವಂತನಾಗಿ ಬಾಳುವುದು ಸುಖವಯ್ಯ ॥ ೨ ॥

ಮತ್ಸರವಿರದ ಸೊಸೆಯು ಮನೆಗೆ ಬಂದರೆ ಸುಖವು ।
ಪುತ್ರ ತಾ ಬುದ್ಧಿವಂತನಾದರೆ ಸುಖವು ॥
ಹಸ್ತವನು ಎತ್ತಿ ದಾನವನು ಕೊಡುವುದು ಸುಖವು ।
ವಸ್ತ್ರವನು ಮಾಸದುಡುವುದು ಬಹಳ ಸುಖವಯ್ಯ ॥ ೩ ॥

ಭೂತಳದಿ ಸಮ್ಮತನು ಆಗಿ ಬಾಳ್ವುದು ಸುಖವು ।
ಭೂತೇಶನಾ ಪ್ರೀತಿ ಬಹಳ ಸುಖವು ॥
ನೀತಿ ನಡೆಯನು ನಡೆವುದೇ ಸುಖವು ಹಿರಿಯರ ।
ಮಾತುಗಳ ನಡಸುವುದು ಬಹಳ ಸುಖವಯ್ಯ ॥ ೪ ॥

ಆಧಾರವಿಲ್ಲದಲೆ ಸಾಲ ಕೊಡುವುದು ಕಷ್ಟ ।
ಮಾದ ಹುಣ್ಣದು ಮತ್ತೆ ಹುಟ್ಟಿದರೆ ಕಷ್ಟ ॥

---

೧ ಝು (೧–೬೦) ಪ್ರತಿಯಿಂದ ಆರಿಸಿಕೊಂಡಿದೆ.
ಮೂಲದಲ್ಲಿಯ ೩–೫ ನುಡಿಗಳು ಕೃತ್ರಿಮ ಕಂಡದ್ದರಿಂದ ಬಿಟ್ಟಿದೆ.

ಹಾದಿಯನು ಬರಿಗಾಲಿನಿಂದ ನಡೆವುದು ಕಷ್ಟ ।
ಆದಿಮೂರುತಿ ಪುರಂದರವಿಠಲರಾಯ ! || ೫ ||

## ೧೪೯

ರಾಗ—ಮುಖಾರಿ ತಾಳ—ಝಂಪೆ

೧ ಕೆಟ್ಟು ನಂಟರ ಸೇರುವುದು ಬಹಳ ಕಷ್ಟ ।
ಹುಟ್ಟೇಳು ಜನ್ಮಕ್ಕೆ ಇದು ಬೇಡ ಹರಿಯೆ || ಪ ||

ಹರಿಯನಪ್ಪಲುಬಹುದು ಉರಿಯ ಮುಕ್ಕಲುಬಹುದು ।
ಉರುವ ಮಾರಿಗೆ ಗ್ರಾಸವಾಗಬಹುದು ||
ಸುರಿವ ಕೆಂಡದ ಮಳೆಗೆ ಬರಿಮೈಯೊಳಿರಬಹುದು ।
ಧರೆಯೊಳಗೆ ದಾರಿದ್ರ್ಯವಾರಿಗೂ ಬೇಡವೋ ! || ೧ ||

ವಿಷವ ಕುಡಿಯಲುಬಹುದು ಇರಿದುಕೊಳ್ಳಲುಬಹುದು ।
ಹಸಿದ ಹುಲಿಬಾಯ ತುತ್ತಾಗಬಹುದು ||
ಹಸಗೆಟ್ಟು ಹೋಗಿ ನಂಟರಲಿ ತಾ ಬಾಯನ್ನು ।
ಕಿಸಿಯಲಾಗದು ಕೊರಳ ಹಿಸುಕಿಕೊಳಬಹುದು || ೨ ||

ಕುಂಡುಗೋಲ ಪಿಡಿದು ಕೂಲಿಯುಮಾಡಿ ಉಣಬಹುದು ।
ಒಡಲಾಸೆಗೊಬ್ಬರಾಳಾಗಬಹುದು ||
೨ ಒಡೆಯ ಶ್ರೀಪುರಂದರವಿಠಲನಾ ಸ್ಮರಣೆಯಲಿ ।
ಬಡವನಾಗಿಯೆ ಬೇಡಿ ಉಣ್ಣಬಹುದು || ೩ ||

---

೧ ಕ. ವಿ. ವಿ. ತಾಳೆಗರಿ (೧೨೪೪-೧೬೫೧) ಪ್ರತಿಯಿಂದ ತೆಗೆದುಕೊಂಡಿದೆ.
ಅ (೧೧) ಪ್ರತಿಯಲ್ಲಿಯೂ ಈ ಹಾಡಿದೆ.
೨ ಅ (೧೧) ಬಿಡದೆ ಭಜಿಸೈ ನಮ್ಮ ಪುರಂದರವಿಠಲನ್ನ ।
ತಡೆಯನೆಂದೆಂದಿಗಿಹ-ಪರವನೀವ ||

೧೫೦

ರಾಗ—ಕಲ್ಯಾಣಿ ತಾಳ—ಝಂಪೆ

೧ ಘಾತಕರಿಗಿನ್ನೇಕೆ ಪರಮಾರ್ಥಶ್ರವಣ ।
ನೀತಿವಂತರೆ ನಿಮಗೆ ಪರನಿಂದೆ ಏಕೆ? ॥ ಪ ॥

ಕೋತಿಗಂದಣವೇಕನಾಥನಿಗೆ ಮುನಿಸೇಕೆ ? ।
ಹೋತು ಕಾಳಿಗವಾಡೆ ಖ್ಯಾತಿಯೇಕೆ ? ॥
ಸೋತ ಮನುಜಗೆ ಮುನ್ನ ಸೊಗಸುವೆಗ್ಗಳವೇಕೆ ? ।
ಪ್ರೀತಿಯಿಲ್ಲದ ಮನೆಯೊಳಿರುವುದೇಕೆ ? ॥ ೧ ॥

ದಯವಂತನಲ್ಲದಾ ದೊರೆಯ ಸೇವೆಯು ಏಕೆ ? ।
ಭಯವು ಉಳ್ಳವಗೆ ರಣರಂಗವೇಕೆ ? ॥
ನಯವಾಕ್ಯವಿಲ್ಲದ—ಪುರುಷ-ನಾರಿಯರೇಕೆ ।
ವ್ಯಯವಾದ ಧನಕಿನ್ನು ಚಿಂತೆಯೇಕೆ ? ॥ ೨ ॥

ಬಲ್ಲಿದನ ಹಗೆಗೊಂಡು ತಲ್ಲಣಿಸುತಿರಲೇಕೆ ? ।
ಬಲ್ಲಧಿಕ ಜ್ಞಾನಿಗೆ ದ್ವೇಷವೇಕೆ ? ॥
ಚೆಲ್ವ ಶ್ರೀಪುರಂದರವಿಟ್ಠಲನ ದಯವಿರಲು ।
ಘಲ್ಲಿಸುವ ಯಮಗಿನ್ನು ಅಂಜಲೇಕೆ ? ॥ ೩ ॥

೧೫೧

ಸುಳಾದಿ

ಧ್ರುವತಾಳ

೨ ಖಳರ ನೋಟವೆ ಹಾವಲ್ಲವೆ, ಹಾವ ಬೇರೆ ಇನ್ನರಸಲೇತಕೆ ? ।
ಖಳರ ನೋಟವೆ ಹುಲಿಯಲ್ಲವೆ, ಹುಲಿಯ ಬೇರೆ ಇನ್ನರಸಲೇತಕೆ ? ।

---

೧ ಖ ೧ (ಬಿಡಿ ೧೮) ಪ್ರತಿಯೊಂದರಲ್ಲಿಯೆ ಸಿಕ್ಕಿದೆ.
೨ ಇ (ಮುದ್ರಿತ) ಎ ಪ್ರತಿಗಳಿಂದ ತೆಗೆದುಕೊಂಡಿದೆ.

ಖಳರ ಕೂಟವೆ ವಿಷವಲ್ಲವೆ, ವಿಷವ ಬೇರೆ ಇನ್ನರಸಲೇತಕಯ್ಯ ?।
ಖಳರೊಳಗೆನ್ನ ಹುಟ್ಟಿಸಿದೆ ಖಳರಿಗೊಪ್ಪಿಸಿಕೊಟ್ಟೆಯಲ್ಲ।
ಖಳರ ಖಂಡದಂಡೆಯ ಮುರಿವನೆ।
ಖಳರ ನಿವಾರಣ ಪುರಂದರವಿಠಲ ॥ ೧ ॥

### ಮಟ್ಟೆತಾಳ

ಖಳರೈಶ್ವರ್ಯ ಖಳರ ವಿಭೂತಿ।
ಖಳರಲಿ ದೌತ್ಯ ಖಳರಲಿ ವಿದ್ಯೆಗಳು।
ಖಳರ ತ್ಯಾಗ ಖಳರ ಕರ್ಮ।
ಖಳರ ಕಷ್ಟ-ನಿಷ್ಠುರಂಗಳು।
ಪುರಂದರವಿಠಲನ ಪರಮಪ್ರಿಯರ।
ಅವಮನ್ನಣೆ—ಇವು ಸದಾ ಸರ್ವದಾ ನೋಡಾ! ॥ ೨ ॥

### ರೂಪಕತಾಳ

ಖಳರ ಕಷ್ಟ-ನಿಷ್ಠುರಂಗಳ ತಾಳಿದರಲಾ ಮನುಗಳು।
ತಾಳಿದರಲಾ ಮುನಿಗಳು?।
ತಾಳಿದರಲಾ ಸಕಲ ದೇವತೆಗಳು ?।
ತಾಳಿದರಲಾ ಪುರಂದರವಿಠಲ ಒಲಿವನ್ನಕ್ಕ! ॥ ೩ ॥

### ಅಟತಾಳ

ಪಾಷಂಡರ ಕೂಡೆ ಕಾಳೆಗ।
ವಿಷ್ಣುದ್ವೇಷಿಗಳ ಕೂಡೆ ಕಾಳೆಗ।
ಕಾಳೆಗ ಕಾಳೆಗ ನಾಸ್ತಿಕರ ಕೂಡೆ।
ಕಾಳೆಗ ಹರಿಡಂಭಕರ ಕೂಡೆ।
ಪುರಂದರವಿಠಲ ಮೆಚ್ಚಿ ಕಾದಿಸಿ ಕಾದಿಸಿ ನಮ್ಮನೆ ಗೆಲಿಸುವ ॥೪॥

ಏಕತಾಳ

ಅಸುರರ ಬದುಕಾ ಬಿಸಿಯುರಿಸಿನವವ್ವ ।
ಸುರರ ಬದುಕು ಸುಸ್ಥಿರ ಕಾಣಿರೊ ।
ಆವಾವ ಜಗ-ಜಗಂಗಳೊಳಗೆ ಸುರರ ಬದುಕು— ।
ಪುರಂದರವಿಠಲನ ಕೋಪಪ್ರಸಾದದಿಂದೆ ।
ಸುರರ ಬದುಕು ಸುಸ್ಥಿರ ಕಾಣಿರೊ! ॥ ೫ ॥

ಜತಿ

ಖಳಕುಲತಿಮಿರ ದಿವಾಕರನರ್ತಿಯು ।
ಖಳಕಮಲೇಂದು ಪುರಂದರವಿಟ್ಠಲ ॥

೧೫೨

ರಾಗ—ಕಾಂಬೋದಿ ತಾಳ—ಆದಿ

೧ ತನಗಲ್ಲದಾ ವಸ್ತು ಎಲ್ಲಿದ್ದರೇನು ।
ಮನಕೆ ಬಾರದ ಹೆಣ್ಣು ಮೆಚ್ಚಿ ಬಂದರೆ ಏನು ? ॥ ಪ ॥

ಆದರಣೆಯಿಲ್ಲದೂಟ ಅಮೃತಾನ್ನವಾದರೇನು ।
ವಾದಿಸುವ ಸತಿ-ಸುತರಿದ್ದು ಫಲವೇನು? ॥
ಕ್ರೋಧ ಬೆಳಸುವ ಸಹೋದರರು ಇದ್ದರೇನು ।
ಮಾದಿಗರ ಮನೆಯೊಳೆ ಮದುವೆಯಾದರೇನು? ॥ ೧ ॥

ಸಾವಿಗಿಲ್ಲದೌಷಧವು ಸಂಚಿತುಂಬ ಇದ್ದರೇನು ।
ದೇವಾಂಕಿತವಿಲ್ಲದ ಕವಿತ್ವವೇನು ? ।

೧ ಅ (೧) ಅ (II) ಝು (೫–೧೦) ಪ್ರತಿಗಳಿಂದ ಆರಿಸಿಕೊಂಡಿದೆ.

ಹೇವವಿಲ್ಲದ ಹೆಣ್ಣು ಹೆಚ್ಚು ಬಾಳಿದರೇನು ।
ಹಾವಿನ ಫಣೆಯೊಳಗೆ ಹಣವಿದ್ದರೇನು ? ॥ ೨ ॥

ಸನ್ಮಾನವಿಲ್ಲದೆ ದೊರೆ ಸಾವಿರಾರು ಕೊಟ್ಟರೆ ಏನು ।
ತನ್ನ ತಾನರಿಯದ ಜ್ಞಾನವೇನು ? ॥
ಉನ್ನತ ಪುರಂದರವಿಠಲನ ನೆನೆಯದವ ।
ಸಂನ್ಯಾಸಿಯಾದರೇನು ಪಾಷಂಡನಾದರೇನು ? ॥ ೩ ॥

## ೧೫೩

### ಉಗಾಭೋಗ

೧ ಬೆಲ್ಲದ ಕಟ್ಟೆಯ ಕಟ್ಟಿ ಬೇವಿನ ಬೀಜವ ಬಿತ್ತಿ ।
ಜೇನಮಳೆಗರೆದರೆ ವಿಷ ಹೋಹುದೇನಯ್ಯ ? ।
ಏನ ಓದಿದರೇನು ಏನ ಕೇಳಿದರೇನು ।
ಮನದೊಳಗಿನ ತಾಮಸ ಮಾಣದನಕ ।
ಏನ ಓದಿದರೇನು ಏನ ಕೇಳಿದರೇನು ? ।
ಕೊಳಲಧ್ವನಿಗೆ ಸರ್ಪ ತಲೆದೂಗುವಂದದಿ ।
ಎನ್ನೊಡೆಯ ಕೇಳಯ್ಯ ಶ್ರೀಪತಿ ಪುರಂದರವಿಠಲ ॥

## ೧೫೪

ರಾಗ—ಕಲ್ಯಾಣಿ ತಾಳ—ಝಂಪೆ

೨ ಶಕ್ತನಾದರೆ ನಂಟರೆಲ್ಲ ಹಿತರು—ಅ- ।
ಶಕ್ತನಾದರೆ ಆಪ್ತರವರೆ ವೈರಿಗಳು ॥ ಪ ॥

---

೧ ಅ (೧೯) ಪ್ರತಿಯಿಂದ ಆರಿಸಿಕೊಂಡಿದೆ.

೨ ಕ. ವಿ. ವಿ. ತಾಳೆಗರಿ (೧೮೫೯–೧೭೫೦) ಪ್ರತಿಯಿಂದ ತೆಗೆದುಕೊಂಡಿದೆ.

ಕಮಲಾರ್ಕರಿಗೆ ನಿರುತ ಕಡುನಂಟುತನವಿರಲು ।
ಕಮಲ ತಾ ಜಲದೊಳಗೆ ಆಡುತಿಹುದು ॥
ಕ್ರಮತಪ್ಪಿ ನೀರಿಂದ ತಡಿಗೆ ಬೀಳಲು ರವಿಯ ।
ಅಮಿತಕಿರಣಗಳಿಂದ ಕಂದಿ ಪೋಗುವುದು ॥ ೧ ॥

ವನದೊಳುರಿ ಸುಡುತಿರಲು ವಾಯುತಾ ಸೋಂಕಲ್ಕೆ ।
ಘನ ಪ್ರಜ್ವಲಿಸುತಿಹುದು ಗಗನಕಡರಿ ॥
ಮನೆಯೊಳಿರ್ದಾ ದೀಪ ಮಾರುತನು ಸೋಂಕಿದರೆ ।
ಘನಶಕ್ತಿ ತಪ್ಪಿ ತಾ ನಂದಿಹೋಗುವುದು ॥ ೨ ॥

ವರದ ಶ್ರೀಪುರಂದರವಿಠಲನ ದಯವಿರಲು ।
ಸರುವ ಜನರೆಲ್ಲ ಮೂಜಗದಿ ಹಿತರು ॥
ಕರಿಯ ಸಲಹಿದ ಹರಿಯ ಕರುಣ ತಪ್ಪಿದ ಮೇಲೆ ।
ಮೊರೆಹೊಕ್ಕರೂ ಕಾಯ್ವ ಮಹಿಮರುಂಟೇ ದೇವ ॥ ೩ ॥

## ೧೫೫

ರಾಗ—ಮುಖಾರಿ ತಾಳ—ಝಂಪೆ

೧ ಚಿತ್ತಶುದ್ಧಿಯಿಲ್ಲದವನವ ಜ್ಞಾನಿಯೆ—ಪುಣ್ಯ- ।
ಪಾತಕಗಳನರಿಯದವ ಮನುಜನೆ ಕೃಷ್ಣ ? ॥ ಪ ॥

ಮಾರಿ ಮನೆಯೊಳಗಿರಲು ಸಹಕಾರಿಯೆನಬಹುದೆ ? ।
ಊರೊಳಗಿನಾ ಕಳ್ಳ ಅವ ಸುಜನನೆ ? ॥
ಜಾರತನವೆಸಗುವಳು ಕುಲವನಿತೆಯಹುದೆ—ಸಂ- ।
ಸಾರದೆಚ್ಚರವಿಲ್ಲದವ ಸುಗುಣನೆ ? ॥ ೧ ॥

ಶ್ವಾನ ಬೂದಿಯಲಿರಲು ಶಿವಭಕ್ತನೆನಬಹುದೆ ? ।
ಕಾನನದೊಳಿಹ ಕಾಗೆ ವನವಾಸಿಯೆ ? ॥

---

೧-ಆ (I) ಝು (೬) ಶ್ರೀ ಪ್ರತಿಗಳಿಂದ ಆರಿಸಿಕೊಂಡಿದೆ.

ಗಾಣ ತಿರುಗುವ ಎತ್ತಿಗದು ಪ್ರದಕ್ಷಿಣೆಯೆ—ಬಕ- |
ಧ್ಯಾನವನು ಮಾಡಲದು ಮೌನವೇ ಕೃಷ್ಣಾ ? ‖ ೨ ‖

ತೋಳ ಅಡವಿಯಲಿರಲು ಅದು ದಿಗಂಬರನಹುದೆ ? |
ಗಾಳಿಯುಂಬುವ ಉರಗ ಉಪವಾಸಿಯೆ ? ‖
ಆಲವದು ಜಡೆಬಿಡಲು ಪರಮಋಷಿಯಹುದೆ—ಬಲು |
ಕಾಲ ಬಾಳಿದ ಹದ್ದು ತಾ ಹಿರಿಯದೆ ? ‖ ೩ ‖

ಬಂಧನದೊಳಿಹ ವ್ಯಾಘ್ರವನು ತಪಸಿಯೆನಬಹುದೆ ? |
ಸಿಂಧುಜವು ಎನೆ ವಿಷವು ಶೀತಕರನೆ ? ‖
ಅಂಧಕನು ಕಣ್ಮುಚ್ಚಲದು ಧ್ಯಾನವೇ ಗಜವು |
ಮಂದಗತಿಯಾದರದು ಸ್ವೈರಣೆಯೆ ಕೃಷ್ಣಾ ? ‖ ೪ ‖

ಮಂಡೂಕ ಗಂಟಲನು ಮಿಾಟಲದು ಮಂತ್ರವೆ ? |
ಗುಂಡುನೀರಲಿ ಮುಳುಗಲದು ಸ್ನಾನವೆ ? ‖
ಪುಂಡರೀಕಾಕ್ಷ ಶ್ರೀಪುರಂದರವಿಟ್ಠಲನ |
ತೊಂಡನಾಗದ ನರನ ಬಾಳು ಬಾಳುವೆಯೆ ? ‖ ೫ ‖

# ೬ ಪರ್ಯಾಯನೀತಿ

೧೫೬

ರಾಗ—ಪಂತುವರಾಳಿ ತಾಳ—ಅಟ

೧ ಸಾಕು ಸಾಕು ಸಂಸಾರ ಸಜ್ಜಾಗಿಲ್ಲ-ಒಲ್ಲೆ ಒಗೆತನವ ‖ಪ‖
ಆರುಮಂದಿ ಗಂಡರಾಳುವರು ಎನ್ನ |
ಆರುಮಂದಿಗೆ ಮೂರು ಸುತ್ತರೆಸಗೆ ‖

೧ ಅ (ಕ) ಜ್ಞ ಮ ಪ್ರತಿಗಳಲ್ಲಿ ಪ [illegible].

ಆರುಮೂರೇಳ್ವರು ಭಾವ-ಮೈದುನರೆಲ್ಲ ।
ಆರೆನೆಂದರೆ ಬಿಡರು ಆರಿಗುಸುರಲಮ್ಮ ॥ ೧ ॥

ಹತ್ತುಮಂದಿ ಬೆನ್ನ ಮುತ್ತಿಕೊಂಡಿಹರೆ ।
ಮತ್ತೆ ಬಿಟ್ಟೆನೆಂಬೆ ಬಿಡಗೊಡರು ॥
ಅತ್ತಿಗೆ ನಗೆಹೆಣ್ಣೆ ಹೊತ್ತುಹೊತ್ತಿನೊಳೆನ್ನ ।
ನೆತ್ತಿಯೊಳು ಹಸ್ತವಿಟ್ಟೆನ್ನ ಸೆಣೆವರಮ್ಮ ॥ ೨ ॥

ಪಂಚರೈವರು ಎನ್ನ ತೊಂಚ ಹಂಚಯೆಂದು ।
ಸಂಚಿತದ ಕರ್ಮವನುಣಿಸುವರು ॥
ವಂಚನೆಯಳಿದ ಪ್ರಪಂಚವನು ಕಳೆದಿಹ ।
ಮಿಂಚಿನ ಪರಿಯೆ ವಿರಿಂಚಿ ಬರೆದಿಹನಮ್ಮ ॥ ೩ ॥

ಜ್ಯೇಷ್ಠನಾಗಿಹ ಪುತ್ರ ಧರ್ಮನ ಅಗಲಿಸಿ ।
ಭ್ರಷ್ಟ ಅತ್ತೆಯು ಮೃತ್ಯುವಾಗಿಹಳು ॥
ಮೆಟ್ಟಲಿನ ಹೊರಗೆ ಕಣ್ಣಿಟ್ಟು ಸಾಧುಗಳನು ।
ದೃಷ್ಟಿಸಿ ನೋಳ್ಪೆನೆಂದರೆ ಕ್ಷಣ ಬಿಡರಮ್ಮ ॥ ೪ ॥

ಒಂಬತ್ತು ಬಾಗಿಲ ಊಳಿಗವನು ಮಾಳ್ಪ ।
ಕುಂಭಕದ ನರಕ ಕಾವರ ದಾಳಿ ॥
ಡಂಭಕವನು ಬಿಟ್ಟು ಇಂಬಿನೊಳಿಟ್ಟು ವಿ- ।
ಶ್ವಂಭರ ಪುರಂದರವಿಠಲಧ್ಯಾನದ ಗುಟ್ಟು ॥ ೫ ॥

## ೧೫೭

ರಾಗ—ಪೂರ್ವಕಲ್ಯಾಣಿ ತಾಳ—ಅಟ

೧ ಸ್ಥಳವಿಲ್ಲವೈ ಭಾಗವತರೆ—ಈಗ- ।
ಒಳಗೆ ಹೊರಗೆ ಸಂದಣಿ ತುಂಬಿದೆ ನೋಡಿ ॥ ಪ ॥

ಅಯ್ದೊಕ್ಕಲಿದರೊಳಗುಂಟು—ಮತ್ತೆ- ।
ಅಯ್ದು ಮಂದಿಯು ಬೇರೆ ಉಂಟು ॥
ಅಯ್ದು ನಾಲ್ಕು ಇದರೊಳಗುಂಟು—ನೀವು- ।
ಬೈದರೆ ಏನು ತೆಗೆಯಿರಿ ನಿಮ್ಮ ಗಂಟು ॥ ೧ ॥

ಆರುಮಂದಿ ಕಳ್ಳರುಂಟು—ಮ- ।
ತ್ತಾರು ಮಂದಿಗೆ ಮತ್ತೆ ಪ್ರೇರಕರುಂಟು ॥
ಪ್ರೇರಕರಿಗೆ ಕರ್ತರುಂಟು—ವಿ- ।
ಚಾರಿಸುವುದಕೆ ನಿಮಗೇನುಂಟು ? ॥ ೨ ॥

ಅತ್ತೆಯವಳು ಬಲು ಜೋಡಿ—ಎನ್ನ- ।
ಒತ್ತಿ ಆಳುವ ಪುರುಷನು ಬಲು ಹೇಡಿ ॥
ಮತ್ತೆ ಮಾವನು ಅಡನಾಡಿ—ಸರಿ- ।
ಹೊತ್ತಿಗೆ ಬರುವ ಮೈದುನ ಬಲು ಕೇಡಿ ॥ ೩ ॥

ನಗೆಹೆಣ್ಣು ಎಂಬವಳು ಕೋಪಿ—ಮಲ- ।
ಮಗಳು ಕಂಡರೆ ಸೇರಳು ಬಲು ಪಾಪಿ ॥
ಹಗೆಗಾತಿ ಅತ್ತಿಗೆ ಶಾಪಿ—ಸುತ್ತ- ।
ಬೊಗಳುವಳು ತಾಳೆನು ನಾನು ಮುಂಗೋಪಿ ॥ ೪ ॥

ಎಷ್ಟು ಹೇಳಲಿ ನಿಮಗೆಲ್ಲ—ಈ- ।
ಕಷ್ಟ ಸಂಸಾರದೊಳಗೆ ಸುಖವಿಲ್ಲ ॥

---

೧ ಅ (೧೧) ಇ ಪ್ರತಿಗಳಲ್ಲಿ ಸಿಕ್ಕುತ್ತದೆ.

ಸ್ಪಷ್ಟವಾಗಿ ಪೇಳ್ವೆ ಸೊಲ್ಲ—ದೇವ- ।
ಸೃಷ್ಟೀಶ ಪುರಂದರವಿಟ್ಠಲ ಬಲ್ಲ ॥ ೫ ॥

## ೧೫೮

ರಾಗ—ಪೂರ್ವಿ ತಾಳ—ಅಟ

೧ ಇಕ್ಕಲಾರೆ ಕೈಯೆಂಜಲು--–ಚಿಕ್ಕ- ।
ಮಕ್ಕಳು ಅಳುತಾವೆ ಹೋಗೋ ದಾಸಯ್ಯ ॥ ಪ ॥

ಮಡಿಕೆ ತೊಳೆಯುತೇನೆ ಮನೆಯ ಸಾರಿಸುತೇನೆ ।
ಒಡೆಯರಿಲ್ಲ ಕಾಣೊ ಹೋಗೋ ದಾಸಯ್ಯ ॥
ತೊಡೆಯ ಮೇಲಣ ಕೂಸು ಮೊಲೆಹಾಲನುಣುತಿದೆ ।
ನಡೆನಡೆ ಕರಕರೆ ಮಾಡದೆ ದಾಸಯ್ಯ ॥ ೧ ॥

ಅಟ್ಟದ ಮೇಲಿನ ಅಕ್ಕಿ ತೆಗೆಯಲಾರೆ ।
ಹೊಟ್ಟೆನೋವು ಕಾಣು ಹೋಗೋ ದಾಸಯ್ಯ ॥
ಮುಟ್ಟಾಗಿ ಕುಳಿತೇನೆ ಮನೆಯವರಿಲ್ಲವೊ ।
ಕಟ್ಟುಗ್ರ ಮಾಡದೆ ಹೋಗೋ ದಾಸಯ್ಯ ॥ ೨ ॥

ವೀಸದ ಕಾಸಿನ ದವಸವ ತಂದಾರೆ ।
ಕೂಸಿಗೆ ಸಾಲದು ಹೋಗೋ ದಾಸಯ್ಯ ॥
ಆಸೆ ಮಾಡಲುಬೇಡ ದೋಷಕಾರ್ತಿ ನಾನು ।
ಶೇಷಾದ್ರಿ ಪುರಂದರವಿಠಲ ದಾಸಯ್ಯ ॥ ೩ ॥

---

೧ ಕ. ವಿ. ವಿ. ತಾಳೆಗರಿ (೭೫೮-೭೫೦) ಪ್ರತಿಯಿಂದ ತೆಗೆದುಕೊಂಡಿದೆ.

## ೧೫೯

ರಾಗ—ನೀಲಾಂಬರಿ ತಾಳ—ತ್ರಿವುಡೆ

೧ ತನುವಿನೊಳಗೆ ಅನುದಿನವಿದ್ದು ।
ಎನಗೊಂದು ಮಾತ ಪೇಳದೆ ಪೋದೆ ಹಂಸಾ ॥ ಪ ॥

ಜಾಳಾಂದ್ರವೆಂಬುದು ಒಂಬತ್ತು ಬಾಗಿಲ ಮನೆ ।
ರೂವಾರವೆಂಬ ಒಂಬತ್ತು ಬಾಗಿಲ ದಾಟಿ ॥
ಗಾಳಿ ತಂಪಿನೊಳಿದ್ದು ತಾನು ಹಾರಿ ಪೋಪಾಗ ।
ಕಾಯಕೆ ಹೇಳದೆ ಹೋಯಿತು ಒಂದು ಮಾತ ॥ ೧ ॥

ಹಳ್ಳ ಕೊಳ್ಳಗಳಲಿ ತಂಪಿನ ತಡಿಯಲಿ ।
ಬಳ್ಳಿಕಾಯಿ ಕಾತು ಫಲವಾಯಿತು ॥
ಒಳ್ಳೆಯ ತನಿಹಣ್ಣು ಉದುರಿ ತಾ ಪೋಪಾಗ ।
ಬಳ್ಳಿಗೆ ಹೇಳದೆ ಹೋಯಿತು ಒಂದು ಮಾತ ॥ ೨ ॥

ಗಟ್ಟ-ಬೆಟ್ಟಗಳಲಿ ಶಾಖೆಯ ತುದಿಯಲಿ ।
ಕಟ್ಟಿತು ಜೇನನು ಸುಖಕಾಗಿ ॥
ಗಟ್ಟಿ ತುಪ್ಪವನುಂಡು ನೊಣ ಹಾರಿ ಪೋಪಾಗ ।
ಹಿಪ್ಪೆಗೆ ಹೇಳದೆ ಹೋಯಿತು ಒಂದು ಮಾತ ॥ ೩ ॥

ರಸಪಿಸ್ತಾರವ ಹಂಸ ಕೇಳಿದೆನ್ನೈ ನಿನ್ನ ।
ಪೆಸರ ಪೇಳಲಿನ್ನಳವಲ್ಲ ॥
ರಸವಸ್ತುವನುಂಡು ಜ್ಯೋತಿ ತಾ ಪೋಪಾಗ ।
ಪಣತಿಗೆ ಪೇಳದೆ ಪೋಯಿತು ಒಂದು ಮಾತ ॥ ೪ ॥

ಹರಿಪುರಂದರವಿಠಲನ ಮಾತು ಪುಸಿಯಲ್ಲ ।
ಹಸೆಯ ಬರೆಹವ ಓದಲು ಬಲ್ಲಡೆ ॥?

೧ ಕ. ವಿ. ವಿ. ತಾಳೆಗರಿ (೧೨೫೩–೧೭೫೦) ಪ್ರತಿಯಿಂದ ತೆಗೆದುಕೊಂಡಿದೆ.

ಸರವನಾಣೆಯ ಮುತ್ತು ಆಗಲಿ ತಾ ಪೋಪಾಗ ।
ಚಿಪ್ಪಿಗೆ ಪೇಳದಾಯಿತು ಒಂದು ಮಾತ ॥ ೫ ॥

# ೭ ಮಂಗಳಂ

## ೧೬೦

ರಾಗ—ಶ್ರೀ ತಾಳ—ಆದಿ

೧ ಮಂಗಳಂ ಮಾರಮಣಗೆ ಮಂಗಳಂ ॥ ಪ ॥

೨ ನೀರೊಳು ಮುಳುಗಿ ನಿಗಮ ತಂದವಗೆ ।
ಘೋರರೂಪದಿ ಕಂಬದೊಳ್ ಬಂದಗೆ ॥ ೧ ॥

ಪೊಡವಿಯನೀರಡಿ ಮಾಡಿದ ದೇವಗೆ ।
ಕೊಡಲಿಯ ಕರನಾಗಿ ಜನಿಸಿದಗೆ ॥
ಮಡದಿ ಸಹಿತ ವನವಾಸದೊಳಿದ್ದಗೆ ।
ಬಿಡದೆ ಪಾಂಡವ ಭೃತ್ಯನಾದವಗೆ ॥ ೨ ॥

ಭರದಲಿ ಸತಿಯರ ವ್ರತಗೆಡಿಸಿದಗೆ ।
ಧುರದಲಿ ತುರಗವನೇರಿದಗೆ ॥
ಗಿರಿಜಾಪುರದೊಳು ವಾಸವಾಗಿದ್ದಗೆ ।
ವರದ ಶ್ರೀಪುರಂದರವಿಟ್ಠಲಗೆ ॥ ೩ ॥

೧ ಕ. ವಿ. ವಿ. ತಾಳೆಗರಿ (೧೮೫೮–೧೭೫೦) ಪ್ರತಿಯಿಂದ ತೆಗೆದುಕೊಂಡಿದೆ.
೨ ಈ ಸುಡಿಯ ೨–೩ ಚರಣಗಳು ತಾಳೆಗರಿಯಲ್ಲಿ ಕಾಣುವುದಿಲ್ಲ.

# ಲೋಕನೀತಿ

## ೧ ನಾಮಸ್ಮರಣನೀತಿ

ಶ್ರೀಹರಿಯಲ್ಲಿ ಉತ್ಕಟವಾದ ಭಕ್ತಿ, ಜೀವನದಲ್ಲಿ ಸದಾಚಾರನಿಷ್ಠೆ— ಇವುಗಳಿಂದ ಮಾನವನು ಇಹ-ಪರಗಳೆರಡನ್ನೂ ಜಯಿಸಬಲ್ಲನೆಂಬುದು ಹರಿದಾಸರ ಸಿದ್ಧಾಂತವಾಗಿದೆ. ಇದುವರೆಗೆ ಶ್ರೀಹರಿಯ ಭಕ್ತಿಯ ವಿಚಾರವನ್ನು ಹೇಳಿದುದಾಯಿತು. ಮಾನವನು ಸದಾಚಾರದಿಂದ ಹೇಗೆ ಜೀವನವನ್ನು ನಡೆಸಬೇಕೆಂಬುದನ್ನು ಕುರಿತು ದಾಸರು ಒರೆದ ಕೀರ್ತನೆಗಳು ಈ ವಿಭಾಗದಲ್ಲಿ ಬಂದಿವೆ.

### ೧ನೆಯ ಹಾಡು

ಈ ಹಾಡಿನಲ್ಲಿ ದಾಸರು ಜೀವನದ ಅಸ್ಥಿರತೆಯ ವಿಚಾರವನ್ನು ಹೇಳಿ, ಭೋಗದಲ್ಲಿ ವೇಳೆಗಳೆಯದೆ ಶ್ರೀಹರಿಯ ಭಕ್ತಿಯಲ್ಲಿ ಕಾಲಕಳೆಯಬೇಕೆಂಬುದನ್ನು 'ಕಾಲವು ತಾಸು ಬಾರಿಸಿ ಎಚ್ಚರಿಸುತ್ತಿದೆ' ಎಂದು ಹೇಳಿದ್ದಾರೆ.

೧ **ತಾಸು ಬಾರಿಸು**=ವೇಳೆ ತಿಳಿಸು.

**ಸುಪ್ಪತ್ತಿಗೆ**=ಮೆತ್ತನೆಯ ಹಾಸಿಗೆ.

**ವಾರ್ಧ**=ಮುಪ್ಪು.

**ಈಶನ ಭಜಕರು**=ಹರಿಭಕ್ತರು.

೨ **ತಾಂಡವಕೃಷ್ಣ**=ಕಾಲಿಯನ ಹೆಡೆಯ ಮೇಲೆ ನರ್ತನಮಾಡುತ್ತಿರುವ ಕೃಷ್ಣ.

**ಭಂಡಧಾವತಿ**=ಅವಿವೇಕದ ಶ್ರಮ.

### ೨ನೆಯ ಹಾಡು

ದಾಸರು ಆಚಾರದಲ್ಲಿ ಮೊದಲನೆಯದಾಗಿ ಹೇಳುವುದು ನಾರಾಯಣನಾಮಸ್ಮರಣೆ; ಆದರೆ ಬರಿ ಈ ನಾಮಸ್ಮರಣದಿಂದ ಮಾನವತೆ ಪರಿಪೂರ್ಣವಾಗದೆಂಬು-

ದನ್ನು, ಅವನು ನಡೆದುಕೊಳ್ಳುವ ಬೇರೆಬೇರೆ ಸದಾಚಾರಗಳೊಂದಿಗೆ ಈ ಹಾಡನ್ನು ರಚಿಸಿದ್ದಾರೆ.

೧ **ಡಿಂಬ**=ದೇಹ.

೨ **ಧ್ಯಾನಕಾನನ**=ಸಂತತವಾದ ಚಿಂತನೆ. (ಧ್ಯಾನವೆಂಬ ಅರಣ್ಯ).

೩ **ಗಿಡವೆಲ್ಲ ನಂಟರು**=ಎಲ್ಲರೂ ನಂಟರು.

## ೩ನೆಯ ಹಾಡು

ಶ್ರೀಹರಿಯ ಉತ್ಕಟಭಕ್ತಿಯೊಂದಿದ್ದರೆ ಮಿಕ್ಕ ಯಾವ ಸಾಂಪ್ರದಾಯಿಕ ಆಚಾರ-ವಿಚಾರಗಳೂ ಬೇಕಿಲ್ಲವೆಂಬುದನ್ನು ದಾಸರು ಈ ಹಾಡಿನಲ್ಲಿ ಹೇಳಿದ್ದಾರೆ.

೧ **ದಾರಿ**=ಜೀವನಪಥ.

೩ **ಕೃಚ್ಛ್ರ**=ದೇಹದಂಡನೆಯ ವ್ರತ.

## ೪ನೆಯ ಹಾಡು

ಹಿಂದಿನ ಹಾಡಿನಲ್ಲಿಯ ವಿಚಾರವನ್ನೇ ಈ ಹಾಡಿನಲ್ಲಿಯೂ ಕಾಣುವೆವು.

೧ **ನಾಗಶಯನ**=ಶೇಷಶಯನ.

೨ **ಗತಿ ತಪ್ಪು**=ಮರಣವೊದಗು.

೩ **ಪರದ**=ಮುಕ್ತಿಯ.

## ೫ನೆಯ ಹಾಡು

ವ್ಯರ್ಥ ಕಾಲವನ್ನು ಕಳೆಯದೆ, ವ್ಯರ್ಥ ಮಾತುಗಳನ್ನಾಡದೆ ಶ್ರೀಹರಿಯನ್ನು ಸ್ಮರಿಸುತ್ತಲಿರು—ಎಂದು ದಾಸರು ಈ ಹಾಡಿನಲ್ಲಿ ವಿಧಿಸಿದ್ದಾರೆ.

೧ **ಏಗಲೊ**=ಯಾವಾಗಲೊ.

೨ **ಏಳುದಿನದ ಕಥೆ**= ಭಾಗವತಪುರಾಣ, ಶುಕಾಚಾರ್ಯರು ಈ ಕಥೆಯನ್ನು ಪರೀಕ್ಷಿದ್‌ರಾಜನಿಗೆ ಹೇಳಿ ಏಳು ದಿವಸಗಳಲ್ಲಿ ಮುಗಿಸಿದ್ದಾರೆ. (ಭಾಗವತ ಸಪ್ತಾಹ).

೩ **ಮೆಟ್ಟೆ**=ಮೆಟ್ಟಲು.

## ೬ನೆಯ ಹಾಡು

ಹರಿಯ ನಾಮಸ್ಮರಣೆಯ ಅಗತ್ಯವನ್ನು ದಾಸರು ಈ ಹಾಡಿನಲ್ಲಿ ವಿವರಿಸಿದ್ದಾರೆ.

೧ **ದುಗ್ಗಾಣಿ**=ಎರಡು ಕಾಣಿ (ಒಂದು ನಾಣ್ಯ).

## ೭ನೆಯ ಹಾಡು

ಮಾನವನಿಗೆ ಮರಣವೆಂಬುದು ಯಾವಾಗ ಬಂದೀತೆಂಬುದರ ನಿಯಮವಿಲ್ಲ. ಆದುದರಿಂದ ಯಾವಾಗಲೂ ಶ್ರೀಹರಿಯನ್ನು ಭಜಿಸಬೇಕೆಂಬುದು ದಾಸರ ಅಭಿಪ್ರಾಯ.

೧ **ಸಿಂಧುಸುತೆ**=ಲಕ್ಷ್ಮಿ.

೨ **ಆತ್ಮ**=ಉಸಿರು, ಜೀವ.

೩ **ಶ್ಲೇಷ್ಮ**=ಲೋಳೆ.

## ೮ನೆಯ ಹಾಡು

ಹರಿಭಕ್ತನಾಗಬೇಕೆನ್ನುವವನು ಯಾವಾಗಲೂ ಹರಿಕಥೆಯ ಶ್ರವಣಮಾಡಬೇಕೆಂಬುದನ್ನು ಈ ಹಾಡಿನಲ್ಲಿ ದಾಸರು ಹೇಳಿದ್ದಾರೆ.

## ೯ನೆಯ ಹಾಡು

ಶ್ರೀಹರಿಯನ್ನು ಬಿಡು ಬೇರೆ ಕ್ಷುದ್ರದೇವತೆಗಳ ಉಪಾಸನೆ ಕೂಡದೆಂಬುದನ್ನು ದಾಸರು ಈ ಉಗಾಭೋಗದಲ್ಲಿ ಉಪಮೆಯೊಂದಿಗೆ ಹೇಳಿದ್ದಾರೆ.

## ೧೦ನೆಯ ಹಾಡು

ಈ ಹಾಡಿನಲ್ಲಿ ದಾಸರು ಹರಿನಾಮಬಂಡದ ಸಾರಿಗೆ ವ್ಯಾಪಾರಿಗಳಾಗಿದ್ದಾರೆ.

೩ **ಗಟ್ಟಿ**=ಬಂಗಾರಗಟ್ಟಿ.

೪ ಕಾವಲಿಗರೈವರು=ಪಂಚೇಂದ್ರಿಯಗಳು.

ಠಕ್ಕುದೋರು=ಮೋಸಗೊಳಿಸು.

## ೧೧ನೆಯ ಹಾಡು

ಈ ಹಾಡಿನಲ್ಲಿ ಶ್ರೀಹರಿಯ ಸ್ಮರಣೆಯೊಂದಿಗೆ ಭಕ್ತನು ನಡೆಸಬೇಕಾದ ಆಚಾರಗಳನ್ನೆಲ್ಲ ದಾಸರು ಪರ್ಯಾಯದಿಂದ ಪ್ರಶ್ನಪದ್ಧತಿಯಲ್ಲಿ ವಿವರಿಸಿದ್ದಾರೆ.

೧ ಶೌಚ=ಶುದ್ಧಿ.

೩ ಅಟ್ಟುಳಿ=ಪೀಡೆ.

## ೧೨ನೆಯ ಹಾಡು

ಭಕ್ತನಾದವನೇ ಹರಿಕಥಾಮೃತದ ಸವಿಯನ್ನು ಅರಿತಿರುವನಲ್ಲದೆ ಸಾಮಾನ್ಯರು ಅದರ ಬೆಲೆಯನ್ನೂ, ರುಚಿಯನ್ನೂ ಅರಿಯರೆಂಬುದನ್ನು ಈ ಹಾಡಿನಲ್ಲಿ ದಾಸರು ಸುಂದರವಾದ ಹಲವು ಉಪಮೆಗಳೊಂದಿಗೆ ಬೋಧಿಸಿದ್ದಾರೆ.

೧ ಸ್ತನ್ಯಪಾನ=ಮೊಲೆಹಾಲು.

೨ ನೀರದ=ಮೋಡ.

ದಿವಸಕರ=ಸೂರ್ಯ.

ದಿವಸಾಂಧಪಕ್ಷಿ=ಗೂಗೆ.

೩ ಭಲ್ಲೂಕ=ಕರಡಿ.

## ೧೩ನೆಯ ಹಾಡು

ಸುಖ-ದುಃಖಗಳೆರಡಕ್ಕೂ ಶ್ರೀಹರಿಯೇ ಕಾರಣವೆಂಬುದನ್ನು ದಾಸರು ಈ ಉಗಾಭೋಗದಲ್ಲಿ ವಿವರಿಸಿದ್ದಾರೆ.

೧ ಸಡ್ಡೆ=ಬಿತ್ತುವ ಸಾಧನ.

ಊಳು=ಸಾಗುಮಾಡು.

## ೧೪ನೆಯ ಹಾಡು

ಈ ಹಾಡಿನಲ್ಲಿಯೂ ಹರಿಭಕುತಿಯ ಅರ್ಥ ಸಾಮಾನ್ಯರಿಗಾಗದೆಂಬುದನ್ನು ಅನೇಕ ಉಪಮೆಗಳೊಂದಿಗೆ ದಾಸರು ವಿವರಿಸಿದ್ದಾರೆ.

## ೧೫ನೆಯ ಹಾಡು

ಹರಿಭಕ್ತಿಗೆ ವಯಸ್ಸು ಕಾರಣವಲ್ಲವೆಂಬುದನ್ನು ಇಲ್ಲಿ ಸಂದರ್ಭಗಳೊಂದಿಗೆ ವಿವರಿಸಲಾಗಿದೆ.

೧ **ವರುಷ**=ವಯಸ್ಸು.

## ೧೬ನೆಯ ಹಾಡು

ಭಕ್ತಿಯಲ್ಲಿ ವಂದನೆ ಎಂಬುದೊಂದು ಪ್ರಕಾರವಿದೆ. ಆ ವಂದನಾಭಕ್ತಿಯ ಮಹತ್ತ್ವವನ್ನು ಇಲ್ಲಿ ಹೇಳಲಾಗಿದೆ.

## ೨ ಭಕ್ತಿಸಾಧನನೀತಿ

ಹರಿದಾಸನಾಗಬೇಕೆಂಬ ಅರಿವು ಮೂಡಿದಾಗ, ಆ ಹರಿದಾಸಸಾಧನದ ರೀತಿ-ನೀತಿಗಳು ಎಷ್ಟೊಂದು ಕಷ್ಟಕರವಾದುದೆಂಬುದನ್ನೂ ಅದಕ್ಕೆ ಜನ ಸಿದ್ಧರಾಗಬಹುದೆ?—ಎಂಬ ಸಂದಿಗ್ಧ ಮನಸ್ಥಿತಿಯನ್ನೂ ದಾಸರು ಈ ವಿಭಾಗದ ಪದ್ಯಗಳಲ್ಲಿ ಕಾಣಿಸಿದ್ದಾರೆ.

## ೧೭ನೆಯ ಹಾಡು

೧ **ದಾಟುಗಾಲಿಡು**=ಹಾರು.

## ೧೮ನೆಯ ಹಾಡು

ಸಾಮಾನ್ಯಮನುಷ್ಯನು ದೇಹಾತ್ಮವಾದಿ. ದೇಹವೇ ತಾನು ಅದರ ಸುಖವೇ ತನ್ನ ಸುಖ ಎಂದು ನಂಬುವನು. ಆದರೆ ಹರಿಭಕ್ತಿಸಾಧಕನಿಗೆ ಇದು ಪೂರ್ತಿ ನಿಷಿದ್ಧ. ದೇಹನಶ್ವರತೆಯನ್ನು ಅವನು ಪೂರ್ತಿಯಾಗಿ ಮನಗಾಣಲೇಬೇಕು.

೧ **ಅನುವಾಗಿ**=ಅನುಕೂಲವಾಗಿ.

೩ **ಗರುಡಕೇತನ**=ಗರುಡಧ್ವಜ.

### ೧೯ನೆಯ ಹಾಡು

ಈ ಹಾಡಿನಲ್ಲಿ ದಾಸರು ಜೀವನ ಅಜ್ಞಾನದ ಅವಸ್ಥೆಯನ್ನೂ ಅದಕ್ಕೆ ಕಾರಣವನ್ನೂ ಹೇಳಿದ್ದಾರೆ.

೨ **ಬಟ್ಟೆ**=ರೀತಿ, ಮಾರ್ಗ.

೩ **ದಶದಿಕ್ಕಿನ ಉದಯುದ ರಾಯರು**=ಯಾವಾಗಲೂ ಪ್ರಬಲವಾಗಿರುವ ದಶೇಂದ್ರಿಯಗಳು.

### ೨೦ನೆಯ ಹಾಡು

ನಿನ್ನ ಭಕ್ತಿ ನನ್ನಲ್ಲಿ ಹೇಗೆ ನೆಲೆಗೊಳ್ಳುವುದೆಂದು ದಾಸರು ಕರುಣಾಭಾವದಿಂದ ದೇವನಲ್ಲಿ ಮೊರೆಯಿಟ್ಟದ್ದಾರೆ.

೧ **ಎಂತು ಅಹುದೊ**=ಹೇಗೆ ಉಂಟಾಗುವುದೊ?
**ವ್ರಣ**=ಹುಣ್ಣು.
೨ **ಅಡಿಯಾಡಿ**=ಎಡತಾಕಿ.
**ಮಡದಿ**=ಇಲ್ಲಿ ಪಡೆದ ಎಂಬ ಪಾಠಾಂತರವಿದ್ದರೆ ಚೆನ್ನಾಗಿತ್ತು.
**ಅತಿಗಳೆ**=ತಿರಸ್ಕರಿಸಿ ನುಡಿ.

### ೨೧ನೆಯ ಹಾಡು

ಇದು ದೇಹ ಮತ್ತು ಜೀವಗಳ ಒಂದು ಸಂವಾದ. ಸಾಧನೆಯಿಲ್ಲದೆ ಅಂತ್ಯಕಾಲವನ್ನು ಕಂಡ ಒಂದು ಜೀವಕ್ಕೆ ದೇಹ ಹೀಗೆ ಕೇಳುತ್ತಿದೆ.

### ೨೨ನೆಯ ಹಾಡು

ಮುಕ್ತಿ, ಮುಕ್ತಿ ಎಂದು ಹಂಬಲಿಸುವ ಮಾನವರಿಗೆ ಮುಕ್ತಿಯು ಸಹಜವಾಗಿ ದೊರೆಯುವುದೆ?—ಎಂದು ದಾಸರು ಕೇಳಿ, ಅದಕ್ಕಾಗಿ ಮಾಡಬೇಕಾದ ಸಾಧನೆಯನ್ನು ಇಲ್ಲಿ ವಿವರಿಸಿದ್ದಾರೆ.

೧ **ಅನುಮಾನ**=ಸಂದೇಹಗಳು.

೩ **ಓಪ**=ಸಂರಕ್ಷಿಸುವವ, ಪ್ರಿಯ.

## ೨೩ನೆಯ ಹಾಡು

ಭಕ್ತನ ರೀತಿ-ನೀತಿಗಳು ಹೇಗಿರಬೇಕೆಂಬುದನ್ನು ದಾಸರು ಈ ಹಾಡಿನಲ್ಲಿ ವಿವರಿಸಿದ್ದಾರೆ.

೧ **ಭವಭಂಜನ**=ಸಂಸಾರವನ್ನು ನಾಶಮಾಡುವವ.

೨ **ಕಲಿಮಲ**=ಕಲಿಕಾಲದ ದುಷ್ಟವಾಸನೆಗಳು.

**ನೋದತೀರ್ಥರು**=ಮಧ್ವಾಚಾರ್ಯರು, ಆನಂದತೀರ್ಥರು.

## ೨೪ನೆಯ ಹಾಡು

ಮಾಡಿದ ಸತ್ಕಾರ್ಯಗಳು ಮಾನವನ ವ್ಯಕ್ತಿತ್ವವನ್ನು—ಜನ್ಮಜನ್ಮದಲ್ಲಿಯೂ—ಹೇಗೆ ರೂಪಿಸುತ್ತವೆಂಬುದನ್ನು ಈ ಹಾಡಿನಲ್ಲಿ ಹೇಳಲಾಗಿದೆ.

**ಗುಲ್ಮರೋಗ**=ಪಿತ್ತಾಶಯ ಮುಂ. ಬೆಳೆಯುವ ಗಂಟಿನ ಬೇನೆ.

## ೨೫ನೆಯ ಹಾಡು

ಭಕ್ತಿಸಾಧನೆಯಿಲ್ಲದ ಸಾಮಾನ್ಯಜೀವಿಗೆ ದಾಸರು ಕರ್ತವ್ಯದ ಎಚ್ಚರ ಮೂಡುವಂತೆ ಈ ಹಾಡಿನಲ್ಲಿ ಚಾಟಿಯ ಏಟುಗಳನ್ನು ಹಾಕಿದ್ದಾರೆ.

೨ **ಬುಗ್ಗೆಯು ಹೊಯ್ಯೊ**=ಮಣ್ಣನ್ನು ಹೊಯ್ಯೊ.

## ೨೬ನೆಯ ಹಾಡು

ಮಾನವನು ಲೋಕದಲ್ಲಿ ಬದುಕಿರುವಾಗ ಮಾಡಬೇಕಾದ ಕಾರ್ಯಗಳು ಯಾವುವೆಂಬುದನ್ನು ಈ ಹಾಡಿನಲ್ಲಿ ದಾಸರು ವಿವರ-ವಿವರವಾಗಿ ಹೇಳಿದ್ದಾರೆ.

೨ **ಬಿರಿಬಿರಿದು ಬಿಚ್ಚುವೆ**=ಹಿಗ್ಗಿಹಿಗ್ಗಿ ಓರೆಕಾಯಿಯಾಗುವೆ.

## ೨೭ನೆಯ ಹಾಡು

ಹಿಂದಿನ ಪದ್ಯದ ಭಾವವೇ ಈ ಪದ್ಯದಲ್ಲಿ ಮುಂದುವರಿದಿದೆ.

೧ **ವಿಹಿತ**=ಉಚಿತವಾದ.

೩ **ಅಂಬು**=ನೀರು.

### ೨೮ನೆಯ ಹಾಡು

ಸಾಧಕನ ಮಾರ್ಗಕ್ರಮಣಕ್ಕಾಗಿ 'ಬುತ್ತಿಯನ್ನು ಕಟ್ಟು' ಎಂದು ಪರ್ಯಾಯದಿಂದ ದಾಸರು ಸಾಧನೆಯ ರೀತಿಗಳನ್ನು ಈ ಹಾಡಿನಲ್ಲಿ ತಿಳಿಸಿದ್ದಾರೆ.

೧ **ಸುಮ್ಮಾನ**=ಒಳ್ಳೇ ಮನಸ್ಸು=ತೃಪ್ತಿ.

**ಒಮ್ಮಾನ**=ಒಂದೇ ಮನಸ್ಸು=ಒಂದು ಅಳತೆ.

೨ **ಗರಿಮೆ**=ಗೌರವ, ಘನತೆ.

### ೨೯ನೆಯ ಹಾಡು

ಈ ಉಗಾಭೋಗದಲ್ಲಿ ಶ್ರೀಕೃಷ್ಣನ ಧ್ಯಾನವಮಾಡು—ಎಂಬ ಮಾತನ್ನು ಹೇಳುತ್ತ ಶ್ರೀಹರಿಯ ಮಾಹಾತ್ಮ್ಯವನ್ನು ದಾಸರು ಹೇಳಿದ್ದಾರೆ.

### ೩೦ನೆಯ ಹಾಡು

ಜೀವನದ ನಶ್ವರತೆಯನ್ನು ಹೇಳಿ ಐಹಿಕಸುಖಕ್ಕಾಗಿ ಹಾರಯಿಸುವ ಜೀವಿಗಳಿಗೆ ದಾಸರು ಈ ಉಗಾಭೋಗದಲ್ಲಿ ಎಚ್ಚರಿಕೆಕೊಟ್ಟಿದ್ದಾರೆ.

೧ **ಹಾರ್**=ಇಚ್ಛಿಸು.

**ಹಾರುವನ**=ಬಯಸುವವನನ್ನು.

**ಐದುಮಂದಿ ಹಾರುವರು**=ಪಂಚೇಂದ್ರಿಯಗಳು.

### ೩೧ನೆಯ ಹಾಡು

ಹರಿದಾಸರ ಧರ್ಮವೆಂದರೆ ಏನೆಂಬುದನ್ನು ದಾಸರು ಈ ಹಾಡಿನಲ್ಲಿ ಮನಸ್ಸಿಗೆ ನಾಟುವಂತೆ ವಿವರಿಸಿದ್ದಾರೆ.

೧ **ಮರ್ಮ**=ರಹಸ್ಯ, ಗುಟ್ಟು.

**ಎತು**=ಒತ್ತಿ ಹೇಳು.

### ೩೨ನೆಯ ಹಾಡು

ಜೀವನದ ನಶ್ವರತೆಯನ್ನು ಹೇಳಿ ಕೂಡಲೆ ಧರ್ಮಕಾರ್ಯಗಳನ್ನು ಕೈಕೊಳ್ಳಿ ಎಂದು ದಾಸರು ಈ ಹಾಡಿನಲ್ಲಿ ವಿಧಿಸಿದ್ದಾರೆ.

೧ **ಬೀಳುಗೊಡು**=ಕಾಲಕಳೆ.

## ೩೩ನೆಯ ಹಾಡು

ಭಕ್ತನು ಮುಕ್ತಿಯನ್ನು ಅಪೇಕ್ಷಿಸಿದರೆ ಆತನಿಗೆ ಜ್ಞಾನವು ಅಗತ್ಯ ಎಂಬ ಮಾತನ್ನು ಈ ಹಾಡಿನಲ್ಲಿ ಹೇಳಲಾಗಿದೆ.

## ೩ ಸದಾಚಾರನೀತಿ

## ೩೪ನೆಯ ಹಾಡು

ಈ ವಿಭಾಗದಲ್ಲಿ ಭಕ್ತಿಸಾಧಕನು ಆಚರಿಸಲೇಬೇಕಾದ ನೀತಿ-ನಿಯಮಗಳನ್ನು ಸೂತ್ರಬದ್ಧವಾಗಿ ಬೇರೆಬೇರೆ ಉಗಾಭೋಗರೂಪದಿಂದ ದಾಸರು ಹೇಳಿದ್ದಾರೆ.

ಎಲ್ಲ ಯುಗಗಳಲ್ಲಿ ಕಲಿಕಾಲವು ಶ್ರೇಷ್ಠಕಾಲವೆಂದು ಭಾಗವತದಲ್ಲಿ ಹೇಳಲಾಗಿದೆ. ಅದೇ ಮಾತನ್ನೇ ಈ ಉಗಾಭೋಗದಲ್ಲಿ ಹೇಳಿದೆ.

**ಕಲುಷ**=ಪಾತಕ.

ನಾನು ದ್ವೇಷ್ಟಿ ಕಲಿಂ ಸಮ್ರಾಟ್ ಸಾರಂಗ ಇವ ಸಾರಭುಕ್ ।
ಕಲೇರ್ದೋಷನಿಧೇರಾಜನ್ನಸ್ತಿಹ್ಯೇಕೋಮಹಾನ್ ಗುಣಃ ॥
(ಭಾಗ. ೧–೧೮–೭)

## ೩೫ನೆಯ ಹಾಡು

ಈ ಉಗಾಭೋಗದಲ್ಲಿ ಪ್ರಾತರ್ವಿಧಿಯನ್ನು ಹೇಳಲಾಗಿದೆ.

ಸ್ಮೃತ್ವಾವಿಷ್ಣುಂ ಸಮುತ್ಥಾಯ ॥ (ಸದಾಚಾರಸ್ಮೃತಿ)
ಗಾಯತ್ರೀಂ ತುಲಸೀಂ ಗಂಗಾಂ ॥ (ವ್ಯಾಸಸ್ಮೃತಿ)
ನೈಋತ್ಯಾಂ ಪಶ್ಚಿಮೇಥವಾ ॥
ವಾರಿ ಅಂತರ್ಧಾಯ ತೃಣೈರ್ಭೂಮಿಂ ॥ (ಮನುಸ್ಮೃತಿ)

## ೩೬ನೆಯ ಹಾಡು

ಸ್ನಾನ-ಸಂಧ್ಯಾವಂದನೆಯನ್ನು ಕುರಿತ ಮಾತುಗಳು ಈ ಉಗಾಭೋಗದಲ್ಲಿವೆ.

ರಜನೀಪ್ರಾಂತಯಾಮಾರ್ಧಃ ಬ್ರಾಹ್ಮಃ ಸಮಯಃ ॥

ಸ್ನಾತ್ವಾ ಸಂಪೂಜಯೇದ್ವಿಷ್ಣುಂ ||
ಗಾಯತ್ರ್ಯಾಚಾಂಜಲಿಂ ದತ್ವಾ ಧ್ಯಾತ್ವಾ ಸೂರ್ಯಗತಂ ಹರಿಂ ||

**ಹತ್ತೈದು ಗಳಿಗೆಯು............ಮತ್ತೈದು ಬರಲು** = ೨೦ ಗಳಿಗೆ ರಾತ್ರಿಯಾದಾಗ.

**ಉತ್ತರಿಸು**=ದೂರಮಾಡು.

## ೩೭ನೆಯ ಹಾಡು

ಪ್ರಾತರ್ವಿಧಿ ಮುಗಿಸಿಕೊಂಡು ದೇವರಿಗೆ ಪ್ರದಕ್ಷಿಣೆಯನ್ನು ಹಾಕಿ ಅತಿಥಿಯನ್ನು ಪೂಜಿಸಬೇಕು.

## ೩೮-೪೦ನೆಯ ಹಾಡು

ಮಲ-ಮೂತ್ರ ವಿಧಿಗಳ ವಿಚಾರವನ್ನು ಈ ಉಗಾಭೋಗದಲ್ಲಿ ಹೇಳಿದೆ.

೩೮ ಗೃಹಿತೋದಕಪಾತ್ರಂ ಯಃ ಕುರ್ಯಾನ್ಮೂತ್ರ ಪುರೀಷಕೇ |
ತತ್ತೋಯಂ ಮೂತ್ರ ತುಲ್ಯಂ ಸ್ಯಾತ್ ದ್ವಿಜಶ್ಚಾಂದ್ರಾಯಣಂ
ಚರೇತ್ || (ವ್ಯಾಸಸ್ಮೃತಿ)

೩೯ ಏಕಾ ಲಿಂಗೇ ಕರೇ ತಿಸ್ರಃ | ಆರ್ದ್ರಾಮಲಕಮಾತ್ರಹಿ||
ಮೂತ್ರಶೌಚೇತು ಮೃತ್ತಿಕಾ ||

೪೦ ಆಪಸ್ತಂಭಸೂತ್ರ |

**ವಿಲಸಿತ**=ಶುದ್ಧ.

**ಜಂಬು**=ನೀರಲ.

**ಪ್ಲಕ್ಷ**=ಬಸರಿ.

**ನೆಲ್ಲನಿಲ್ಲು**=ಬತ್ತದ ಗೊಳಲಿಯ ಬೂದಿ (?)

**ಮಹಾಲಯ**=ಶ್ರಾದ್ಧಪಕ್ಷ.

## ೪೧ನೆಯ ಹಾಡು

ಸ್ನಾನದ ವಿಚಾರ

**ಸಂಕಲ್ಪವೇದ**=ವೇದವಿಹಿತವಾದ ಸಂಕಲ್ಪ.

## ೪೨ನೆಯ ಹಾಡು

ಇದರಲ್ಲಿ ಗೋಪೀಚಂದನದ ಶ್ರೇಷ್ಠತೆಯನ್ನು ವಿವರಿಸಿದೆ.

**ಕೂಪ**=ಸೇದುವ ಬಾವಿ.

**ವಾಪಿ**=ಹೊಕ್ಕುತುಂಬುವ ಬಾವಿ.

**ನೆರೆ**=ಕೂಡು.

## ೪೩ನೆಯ ಹಾಡು

ಇಲ್ಲಿ ಹೃದಯಶುದ್ಧಿಯ ವಿಚಾರವನ್ನು ಹೇಳುತ್ತ ದಾಂಭಿಕ ಸ್ನಾನಾದಿಗಳನ್ನು ದಾಸರು ವಿಡಂಬನೆ ಮಾಡಿದ್ದಾರೆ.

## ೪೪ನೆಯ ಹಾಡು

ಸಾಧಕನಿಗೆ ತನ್ನ ಸಾಧನೆಯಕಾಲದಲ್ಲಿ ಎಂತಹ ವಸ್ತ್ರವಿರಬೇಕೆಂಬುದನ್ನು ದಾಸರು ವಿಧಿಸಿದ್ದಾರೆ.

**ಶಾಲೆ**=ಸೀರೆ.

**ಕಾಲ**=ಕಪ್ಪು.

## ೪೫ನೆಯ ಹಾಡು

ಇಲ್ಲಿ ಸ್ನಾನಾದಿಗಳ ಬಗೆಗೆ ಅಪದ್ಧರ್ಮವನ್ನು ದಾಸರು ಹೇಳಿದ್ದಾರೆ.

**ಅಂದವಿಲ್ಲದ**=ಮೈಯಲ್ಲಿ ನೆಟ್ಟಗಿಲ್ಲದ.

**ಇಂದ್ರ, ೧೪ ಮನು, ನರಕ**=೧೪ ಮನುಗಳೂ ಇಂದ್ರರೂ ಇರುವವರೆಗೆ ನರಕ.

## ೪೬ನೆಯ ಹಾಡು

ಸಂಧ್ಯಾವಂದನಕ್ಕೆ ಯುಕ್ತಕಾಲವು ಯಾವುದೆಂಬುದನ್ನು ಈ ಉಗಾಭೋಗವು ಹೇಳುತ್ತಿದೆ.

ಉತ್ತಮಾ ತಾರಕೋಪೇತಾ । ಮಧ್ಯಮಾ ಲುಪ್ತತಾರಕಾ ॥
ಅಧಮಾ ಸೂರ್ಯಸಹಿತಾ । ಏವಂ ಸಂಧ್ಯಾತ್ರಿಧಾಮತಾ ॥
(ಸಂಧ್ಯಾಭಾಷ್ಯ)

## ೪೭ನೆಯ ಹಾಡು

**ಕಂಡಸೂರ್ಯ**=ಸೂರ್ಯೋದಯ.

**ಕಾಣದ ಸೂರ್ಯ**=ಉದಯವಾಗದ ಸೂರ್ಯ.

**ಮಾರ್ತಾಂಡ**=ಮಿಕ. (ಅರ್ಥ ಚೆನ್ನಾಗಿ ಹೊಂದುವುದಿಲ್ಲ).

## ೪೮ನೆಯ ಹಾಡು

ಈ ಉಗಾಭೋಗವು ಆಚಮನವಿಧಿಯನ್ನು ನಿರೂಪಿಸುತ್ತಿದೆ.

**ಹಳ್ಳ**=ತಗ್ಗು.

## ೪೯ನೆಯ ಹಾಡು

ಇದೂ ಆಚಮನವಿಧಿಯನ್ನು ನಿರೂಪಿಸುತ್ತಿದೆ.

**ಹವಣು**=ಪ್ರಮಾಣ. (ಕರ್ಮಾಂತೇದ್ವಿರಾಚಮ್ಯ)

## ೫೦ನೆಯ ಹಾಡು

ಆಚಮನಾದಿಗಳಿಗೆ ಎಡಗೈ ಕೂಡದೆಂಬುದನ್ನು ಈ ಉಗಾಭೋಗವು ಹೇಳುತ್ತಿದೆ.

**ಅಭ್ಯಂಗನ**=ಸ್ನಾನ.

## ೫೧ನೆಯ ಹಾಡು

ಈ ಉಗಾಭೋಗದಲ್ಲಿ ಅರ್ಘ್ಯದ ಮಹತ್ತ್ವವನ್ನು ಹೇಳಲಾಗಿದೆ.

**ರಮ್ಮೆ**=ರಮಾ.

**ಸುಮ್ಮನಸ**=(ಸುಮನಸ್) ಸೌಹಾರ್ದ=ಪ್ರೀತಿ.

## ೫೨ನೆಯ ಹಾಡು

ಈ ಉಗಾಭೋಗವು ಜಪದ ವಿಧಿ-ವಿಧಾನಗಳನ್ನು ತಿಳಿಸುತ್ತದೆ.

ವಿ. ಸೂ:—ಜಪಮಾಡುವಾಗ ಕೈಗಳನ್ನು ತೊಡೆಯ ಕೆಳಗೂ, ಹಿಂದೆಯೂ, ಮುಂದೆಯೂ ಮಾಡಲಾಗದು; ಮತ್ತು ಮಂತ್ರದ ಅರ್ಥವನ್ನು ಚೆನ್ನಾಗಿ ತಿಳಿದುಕೊಳ್ಳಬೇಕು.

## ೫೩ನೆಯ ಹಾಡು

ಇದರಲ್ಲಿಯೂ ಜಪದ ವಿವರಣೆ ಮುಂದುವರಿದಿದೆ.

ಬಲಗೈ ಬೆರಳುಗಳ ಸಮೂಹ ( ಹೆಬ್ಬೆರಳನ್ನು ಬಿಟ್ಟು )ವನ್ನು ಹೆಬ್ಬೆರಳಿನಿಂದ ಕೆಳಗೆ ತೋರಿಸಿದಂತೆ, ಅನಾಮಿಕಾ ಕೊನೆಯ ಗೆರೆಯಿಂದ ನಡುಬೆರಳ ಕೊನೆಯ-ಗೆರೆಯ ವರೆಗೆ ಎಣಿಸುತ್ತ ಮಾಡುವುದು ಜಪದ ಒಂದು ವಿಧಾನ.




## ೫೪ನೆಯ ಹಾಡು

ಇದರಲ್ಲಿಯೂ ಜಪದ ವಿಧಾನವಿದೆ.

**ನೀರು ಸೋರದೆ**-ಬೆರಳುಗಳನ್ನು ಬಿಗಿಯಾಗಿ ಹಿಡಿದಿರಬೇಕು.

## ೫೫ನೆಯ ಹಾಡು

ಪರಮಾತ್ಮನ ಯಾನಯಾನ ಅಭಿಷೇಕದಿಂದ ಎಂತೆಂತಹ ಪಾಪಗಳು ನಷ್ಟ-ವಾಗುವುವೆಂಬುದನ್ನು ದಾಸರು ಈ ಉಗಾಭೋಗದಲ್ಲಿ ಹೇಳಿದ್ದಾರೆ.

**ತಾಪಸೋತ್ತಮ** ವೇದವ್ಯಾಸರು.

## ೫೬ನೆಯ ಹಾಡು

ಇದರಲ್ಲಿ ‘ ವರ್ಣಮಾತ್ರಂ ಕಲಿಸಿದಾತಂ ಗುರು ’ ಎಂಬ ಮಾತನ್ನು ಹೇಳಿ, ಅಂತಹ ಗುರುವಿಗೆ ಯೋಗ್ಯ ಮನ್ನಣೆ ಸಲ್ಲಿಸಬೇಕೆಂಬುದನ್ನು ದಾಸರು ಹೇಳಿದ್ದಾರೆ.

## ೫೭ನೆಯ ಹಾಡು

ನಿತ್ಯವೂ ದೇವಯಜ್ಞ, ಅತಿಥಿಯಜ್ಞಗಳು ಮನೆಯಲ್ಲಿ ನಡೆಯದಿದ್ದರೆ ಅವನಿಗೆ ದೇವನು ಒಲಿಯನೆಂದು ದಾಸರು ಇಲ್ಲಿ ಹೇಳಿದ್ದಾರೆ.

**ಸದ್ಯೋಘೃತ**=ಆದೇ ಬೆಣ್ಣೆ ಕಾಸಿದ ತುಪ್ಪ.

## ೫೮ನೆಯ ಹಾಡು

ಅತಿಥಿಗಳಿಗೆ ಅನ್ನದಾನ ಮಾಡಬೇಕೆಂಬುದನ್ನು ಈ ಉಗಾಭೋಗದಲ್ಲಿ ಹೇಳಲಾಗಿದೆ.

**ಹಾಗ**=ನಾಣ್ಯ, ಸುಂಕ.

## ೫೯ನೆಯ ಹಾಡು

ಅತಿಥಿಯ ಕುಲ-ಶೀಲಗಳನ್ನು ವಿಚಾರಿಸಕೂಡದು.

**ಬ್ರಹ್ಮಘ್ನ**=ಬ್ರಾಹ್ಮಣಹತ್ಯೆ ಮಾಡಿದವ.

## ೬೦ನೆಯ ಹಾಡು

ಹಿಂದಿನ ಹಾಡಿನ ಭಾವವೇ ಇಲ್ಲಿ ಮುಂದುವರಿದೆ.

## ೬೧ನೆಯ ಹಾಡು

ಅತಿಥಿಗಳಿಗೆ ಅನ್ನದಾನ ಮಾಡಲೇಬೇಕೆಂದು ಹೇಳಿದ ದಾಸರು, ಪುಕ್ಕಟೆಯಾಗಿ ದೊರೆಯುವ ಪರಾನ್ನದಿಂದ ಪಾಪವುಂಟೆಂಬುದನ್ನೂ ನಿಷ್ಠುರವಾದ ನುಡಿಗಳಿಂದ ಹೇಳಿದ್ದಾರೆ.

## ೬೨ನೆಯ ಹಾಡು

ಜಲಪಾನದ ವಿಚಾರದಲ್ಲಿ ವಿಧಿ-ನಿಯಮಗಳು.

## ೬೩ನೆಯ ಹಾಡು

ಗೃಹಸ್ಥನಿಗೂ ಗೃಹಿಣಿಗೂ ತೀರ ನಿಷಿದ್ಧಕರವಾದ ಮೂರು ಕಾರ್ಯಗಳ ವಿಚಾರಗಳನ್ನು ಇದರಲ್ಲಿ ಹೇಳಲಾಗಿದೆ.

**ಕುಂದದ**=ಉರಿಯುತ್ತಿರುವ.

**ಕೂಷ್ಮಾಂಡ**=ಸಂಡಿಗೆಗುಂಬಳ=ಬೂದುಗುಂಬಳ.

## ೬೪ನೆಯ ಹಾಡು

ಮನೆ-ಮನೆಯಲ್ಲಿಯೂ ವೇದ-ಪಾರಾಯಣ ವಿಪ್ರಪೂಜೆಗಳು ನಡೆಯಬೇಕೆಂಬುದನ್ನು ಈ ಉಗಾಭೋಗದಲ್ಲಿ ಹೇಳಲಾಗಿದೆ.

**ಸ್ವಾಹಾಕಾರ**=ದೇವಯಜ್ಞಕಾರ್ಯಗಳು.

**ಸ್ವಧಾಕಾರ**=ಪಿತೃತರ್ಪಣಾದಿ ಕಾರ್ಯಗಳು.

## ೬೫ನೆಯ ಹಾಡು

ಈ ಉಗಾಭೋಗದಲ್ಲಿ ದಾನಗಳ ತಾರತಮ್ಯಗಳನ್ನು ಹೇಳಲಾಗಿದೆ.

**ವೃಷೋತ್ಸರ್ಜನ**=ಗೂಳಿ ಬಿಡುವುದು.

**ಕ್ರತು**=ಯಜ್ಞ.

## ೬೬ನೆಯ ಹಾಡು

ಹೃದಯದಲ್ಲಿ ಅಂಕುರಿಸುವ ಶ್ರೀಹರಿಭಕ್ತಿಯನ್ನು ಇಲ್ಲಿ ಬೇರೆಬೇರೆ ರೂಪಕಗಳಿಂದ ವರ್ಣಿಸಿ ಹೇಳಲಾಗಿದೆ.

**ಎದೆಯನಾಡು**=ಹೃದಯ.

**ಸೋಜಿಗ**=ಭಕ್ತಿ.

## ೬೭ನೆಯ ಹಾಡು

ಶ್ರಾದ್ಧದ ದಿನದಲ್ಲಿ ನಿಷಿದ್ಧ ಪದಾರ್ಥಗಳ ವಿಚಾರವನ್ನು ಈ ಉಗಾಭೋಗದಲ್ಲಿ ಹೇಳಲಾಗಿದೆ.

**ಹಿರಿಯರ ದಿನ**=ಶ್ರಾದ್ಧದ ದಿನ.

**ಅತ್ತೈಲಭಕ್ಷ್ಯ**=ಎಲ್ಲ ಭಕ್ಷ್ಯಗಳನ್ನು ತುಪ್ಪದಲ್ಲಿ ಕರಿಯಬೇಕು.

## ೬೮ನೆಯ ಹಾಡು

ಆಚಾರ-ಅನುಷ್ಠಾನಗಳ ಪ್ರಮಾಣವನ್ನು ಇಲ್ಲಿ—ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿಗಳಿಗೆ—ಹೇಳಲಾಗಿದೆ.

## ೬೯ನೆಯ ಹಾಡು

ಯುಗ-ಯುಗದಲ್ಲಿಯೂ ಮಾಡಬೇಕಾದ ಸಾಧನಗಳ ರೀತಿಯನ್ನು ಈ ಉಗಾಭೋಗವು ವಿವರಿಸುತ್ತಿದೆ.

**ಗಾನ**=ಕಲೌತದ್ ಹರಿಕೀರ್ತನಂ. (ಭಾಗ.)

ಧ್ಯಾಯನ್ ಕೃತೇ ಯಜನ್ ಯಜ್ಞೈಸ್ತ್ರೇತಾಯಾಂ ದ್ವಾಪರೇಽರ್ಚಯನ್ ।
ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಂ ॥ (ವಿ. ಪು.)

## ೭೦ನೆಯ ಹಾಡು

ಹರಿಯ ಕಲ್ಯಾಣಗುಣಗಳ ಕೀರ್ತನೆಯನ್ನು ಕೇಳದವನ ಜನ್ಮವು ವ್ಯರ್ಥವೆಂಬುದನ್ನು ಈ ಉಗಾಭೋಗವು ಹೇಳುತ್ತಿದೆ.

## ೭೧ನೆಯ ಹಾಡು

ಮನಃಶುಚಿಯೇ ನಿಜವಾದ ಮಡಿಯೆಂಬುದನ್ನು ದಾಸರು ಈ ಹಾಡಿನಲ್ಲಿ ಸ್ಪಷ್ಟವಾದ ಮಾತುಗಳಲ್ಲಿ ಹೇಳಿದ್ದಾರೆ.

೧ **ಬಿಕನಾಸಿ**=ತಿರಿದು ಕೂಳು ತಿನ್ನುವವ.

(ತ್ಸ—ಭಿಕ್ಷಾನ್ನಂ ಆಶಯತಿ ಇತಿ)

೨ **ಮುಟ್ಟು**=ಮೈಲಿಗೆ.

## ೭೨ನೆಯ ಹಾಡು

ನಿಜವಾದ ಮುಡಿಯೆಂದರೆ ಯಾವುದು? ಆಭಾಸದ ಮುಡಿ ಯಾವುದು?—ಎಂಬುದನ್ನು ದಾಸರು ಈ ಹಾಡಿನಲ್ಲಿ ಹೇಳಿದ್ದಾರೆ.

೧ **ಪೊಡವಿಪಾಲಕ**=ಶ್ರೀಹರಿ. (ಭೂರಮಣ).

೬ **ಮಾನ**=ಆದರ.

**ಸುಮ್ಮಾನ**=ಸಂತೋಷ.

## ೭೩ನೆಯ ಹಾಡು

ವಿಷ್ಣುಭಕ್ತರು ಹೇಗಿರಬೇಕೆಂಬುದನ್ನು ದಾಸರು ಇಲ್ಲಿ ವಿಡಂಬಕರೀತಿಯಲ್ಲಿ ಹೇಳಿದ್ದಾರೆ.

## ೭೪ನೆಯ ಹಾಡು

ಈ ಹಾಡಿನಲ್ಲಿಯೂ ಹರಿದಾಸನ ಲಕ್ಷಣಗಳನ್ನು ಹೇಳಲಾಗಿದೆ.

೧ **ತೊಂಡರು**=ಹರಿಭಕ್ತರು.

## ೭೫ನೆಯ ಹಾಡು

ಸಾಮಾನ್ಯರ ದೇವರಪೂಜೆಯನ್ನು ಈ ಉಗಾಭೋಗದಲ್ಲಿ ದಾಸರು ವಿಡಂಬನೆ ಮಾಡಿದ್ದಾರೆ.

**ಉರಗಗಾರ**=ಹಾವುಗಾರ.

## ೭೬ನೆಯ ಹಾಡು

ಈ ಹಾಡಿನಲ್ಲಿ ದಾಸರು ಮಾನವನ ಸಾಲಗೆಯ ಕರ್ತವ್ಯವೇನೆಂಬುದನ್ನು ತಿಳಿಸಿದ್ದಾರೆ.

## ೭೭ನೆಯ ಹಾಡು

ಈ ಹಾಡಿನಲ್ಲಿ ಸಾಧಕನ ಸತ್ಸಂತಿಕೆಯ ಮಾಹಾತ್ಮ್ಯವನ್ನು ದಾಸರು ಬಣ್ಣಿಸಿ ಹೇಳಿದ್ದಾರೆ.

೧ **ಅಪ್ಪಳಿಸಿ**=ಗಟ್ಟಿಯಾಗಿ ಹೊಡೆದು.

**ಸರ್ಪಗಳು.......ಅಪರಾಧವೇನಯ್ಯ**=ಹಾವುಗಳು ಬರಿ ಗಾಳಿಯ ತಿಂದು ಬದುಕುವುವೆಂಬ ಸಮಯವಿದೆ.

## ೭೮ನೆಯ ಹಾಡು

ಪರಾನ್ನವು ದಾಸರಿಗೆ ವಿಷಸಮವಾಗಿ ಪರಿಣಮಿಸಿರುವುದು. ಈ ಹಾಡಿನಲ್ಲಿ ಅವರು ತಮ್ಮ ಅನುಭವವನ್ನೇ ರೂಪಿಸಿರುವಂತಿದೆ.

೧ **ಪರಮೇಷ್ಟಿ**=ಬ್ರಹ್ಮ.

೨ **ಸ್ವಪನ**=ಸ್ವಪ್ನ.

೩ **ಪ್ರಶಸ್ತ**=ತೃಪ್ತಿಕರ.

೪ **ವ್ರಜ**=ಸಮೂಹ.

## ೭೯ನೆಯ ಹಾಡು

ಹರಿದಾಸನ ನಡೆವಳಿಯನ್ನೇ ಈ ಹಾಡು ವಿವರಿಸುತ್ತಿದೆ.

೩ **ವಿರಿಂಚಿ**=ಬ್ರಹ್ಮ.

**ಪರಿ**=ಸ್ಥಾನ.

೪ **ಷಟ್ಕರ್ಮ**=೬ ಕರ್ಮಗಳು.

ಅಧ್ಯಯನಂ ಅಧ್ಯಾಪನಂ ಯಜನಂ ಯಾಜನಂತಥಾ ।
ದಾನಂ ಪ್ರತಿಗೃಹಂ ಚೈವ ಬ್ರಾಹ್ಮಣಾನಾಮಕಲ್ಪಯತ್ ॥

(ಮನುಸ್ಮೃತಿ)

# ೪ ಮಾನವನೀತಿ

## ೧ ದೇಹ-ಕುಲ

## ೮೦ನೆಯ ಹಾಡು

ಭಕ್ತಿಸಾಧಕನು ಮೊದಲು ಅರಿತುಕೊಳ್ಳಬೇಕಾದುದು ತನ್ನ ದೇಹದ ನಶ್ವರತೆಯ ವಿಚಾರವನ್ನು; ಜನನ-ಮರಣಗಳ ದುಃಖಗಳನ್ನು. ಎಂತಲೆ ದಾಸರು ಈ ಬಗೆಯ ಅನೇಕ ಹಾಡುಗಳನ್ನು ರಚಿಸಿ ಬೋಧಿಸಿದ್ದಾರೆ.

೧ **ಅಶೌಚ**=ಶುಚಿಯಿಲ್ಲದ್ದು, ಹೊಲಸು.

**ತನುವಿದ್ದಾಗಲೆ.........ಏನು ಸುಖ :**

ಜೀವಿಸಿರುವಾಗಲೆ—ದೇಹವಿದ್ದೂ ಹೃದಯಶುದ್ಧಿಯಿಲ್ಲದಿದ್ದರೆ ಅದರಿಂದಾ-ಗುವ—ಕಟುಫಲಗಳನ್ನು ಉಂಬುವುದರಲ್ಲಿ ಯಾವ ಸುಖವಿದೆಯೆಂದು ದಾಸರು ಕೇಳಿದ್ದಾರೆ.

೨ **ಮಲಭಾಂಡ**=ಹೊಲಸಿನ ಆಶ್ರಯ.

## ೮೧ನೆಯ ಹಾಡು

ಇಲ್ಲಿಯೂ ದೇಹದ ಅನಿತ್ಯತೆಯನ್ನೇ ಬಣ್ಣಿಸಲಾಗಿದೆ.

೧ **ಇಂದ್ರಿಯ ಪ್ರತಿಮೆ**=ಬೇರೆ ದೇಹ.

೩ **ಆಗದ**=ಅಪಥ್ಯಕರವಾದ.

## ೮೨ನೆಯ ಹಾಡು

ಸಂಸಾರದ ಅಸ್ಥಿರತೆಯನ್ನು ಮೊದಲು ಹೇಳಿ, ಬಳಿಕ ಜೀವಿಸಿದ ಕಾಲದಲ್ಲಿ ಮನುಷ್ಯನು ಮಾಡಬೇಕಾದ ನಿತ್ಯಕರ್ಮಗಳು ಯಾವುವೆಂಬುದನ್ನು ಇಲ್ಲಿ ದಾಸರು ಹೇಳಿದ್ದಾರೆ.

೨ **ತಳ್ಳಿಕಾರ**=ತುಂಟ.

**ಉಳ್ಳವ**=ಶ್ರೀಮಂತ, ಬಲ್ಲಿದ.

೩ **ಅಳುಪು**=ಇಚ್ಛಿಸು.

## ೮೩ನೆಯ ಹಾಡು

ಈ ಹಾಡಿನಲ್ಲಿಯೂ ಸಂಸಾರ-ಸೌಭಾಗ್ಯಗಳ ಅಸ್ಥಿರತೆಯನ್ನು ಹೇಳಲಾಗಿದೆ.

೧ **ಲೊಳಲೊಟ್ಟೆ**–(ಇದು ಒಳಲೊಟ್ಟೆ ಎಂದು ಇರಬಹುದೆ?)
ನಿಃಸಾರ

**ಮಾನ್ಯ**=ಮನ್ನೆಯರು.

## ೮೪ನೆಯ ಹಾಡು

ಸಾಧಕನಲ್ಲಿ ಅಹಂಕಾರಕ್ಕೆ ಇಂಬು ಇರಬಾರದೆಂಬುದನ್ನು ಇಲ್ಲಿ ದಾಸರು ಬೇರೆ-ಬೇರೆ ಪೌರಾಣಿಕ ಉದಾಹರಣೆಗಳಿಂದ ತಿಳಿಸಿದ್ದಾರೆ.

೧ **ಹಮ್ಮು**=ಅಹಂಕಾರದ ಮಾತು.

೪ **ಖಗಪತಿ**=ಗರುಡ.

೫ **ಪಂಥಗಾರಿಕೆ**=ಪಣ ತೊಡುವುದು.

## ೮೫ನೆಯ ಹಾಡು

ಹರಿಸ್ಮರಣೆಯಿಲ್ಲದೆ ಇರುವ ಸೋಮಾರಿಯು ಮೋಕ್ಷವನ್ನು ಅಪೇಕ್ಷಿಸಿದರೆ ಅದು ಸಿಕ್ಕೀತೆ ?—ಎಂಬುದನ್ನು ದಾಸರು ಇಲ್ಲಿ ಅನೇಕ ದೀಪಕ ಉದಾಹರಣೆಗಳೊಂದಿಗೆ ಹೇಳಿದ್ದಾರೆ.

೧ **ಓಡು**=ಒಡಕು ಹಂಚು.

## ೮೬ನೆಯ ಹಾಡು

ಭಕ್ತನು ನಿಜವಾಗಿ ಭಕ್ತಿರಹಸ್ಯವನ್ನು ಅರಿತಾಗ ಅವನಿಗೆ ಕುಲವೆಂಬುದು ಇರ-ಲಾರದೆಂದು ದಾಸರು ಈ ಹಾಡಿನಲ್ಲಿ ಸೋದಾಹರಣವಾಗಿ ಹೇಳಿದ್ದಾರೆ.

೧ **ಭಾವ**=ಭಕ್ತಿಯ ರಹಸ್ಯ.

**ಅಸು**=ಹೆಚ್ಚಾಗಿ.

೨ **ಇಂಬಿಡು**=ಇಂಬಾಗಿ ಇಡು=ದೂರಿಡು.

## ೮೭ನೆಯ ಹಾಡು

ನಿಜವಾದ ಹೊಲೆಯ-ಹೊಲತಿ ಯಾರು ?—ಎಂಬುದನ್ನು ದಾಸರು ಈ ಹಾಡಿನಲ್ಲಿ ತಿಳಿಯಾಗಿ ತಿಳಿಸಿದ್ದಾರೆ.

೧ **ವಾರ್ಧಕ್ಯಮದ**=ಮುದಿಹುಚ್ಚು.

೨ **ಏಳಿಸಿ**=ತಿರಸ್ಕರಿಸಿ.

೩ **ತರ್ಕಿಸು**=ವಾದಿಸು, ಜಗಳಾಡು.

**ರಚ್ಚೆ**=ಜಗಳಾಟ, ರಂಬಾಟ.

೪ **ಅಪಸ್ಮಾರಿ**=ಬುದ್ಧಿಗೇಡಿ.

೫ **ನಿಜವರ್ಯರ**=ತನಗಿಂತಲೂ ಶ್ರೇಷ್ಠರು.

## ೮೮ನೆಯ ಹಾಡು

ಮೇಲಿನ ಹಾಡಿನ ಭಾವವೇ ಇಲ್ಲಿ ಮುಂದುವರಿದಿದೆ.

೧ **ಭಾಳದಲಿ........ಹೊಲೆಯ**=ಇದರ ಪಾಠಾಂತರ ಸಿಕ್ಕಿಲ್ಲ.

೨ **ಬದ್ಧವಹ**=ಕಟ್ಟುನಿಟ್ಟಿಗೆ ಒಳಗಾದ.

**ಮದ್ದು**=ವಿಷ.

## ೨ ಮನಸ್ಸು

## ೮೯ನೆಯ ಹಾಡು

ಮನಸ್ಸೇ ಮಾನವನ ಎಲ್ಲ ದೋಷಗಳಿಗೂ ಕಾರಣವೆಂಬುದನ್ನರಿತ ದಾಸರು ಅದನ್ನು ಹದನುಗೊಳಿಸುವ ವಿಷಯದಲ್ಲಿ ಹಲವಾರು ಮಾತುಗಳನ್ನು ಹೇಳಿದ್ದಾರೆ. ಇಲ್ಲಿ 'ಮನವ ತೊಳೆಯದನಕ ಮಲವು ತೊಳೆಯಬಲ್ಲುದೆ?' ಎಂಬ ನೀತಿಸೂತ್ರವನ್ನು ವ್ಯಾಖ್ಯಾನಿಸಿದ್ದಾರೆ.

೧ **ಅಮೋಘ**=ಅತಿಶಯ.

೪ **ವೀಸ**=ಚಿಕ್ಕ ನಾಣ್ಯ.

೫ **ಪರಾಧೀನ**=ಪರಮಾತ್ಮನ ಅಧೀನ.

## ೯೦ನೆಯ ಹಾಡು

ಭಕ್ತಿಯಿಲ್ಲದ ಮಾನವನ ಸ್ನಾನಾದಿ ಕರ್ಮಗಳಿಂದ ಏನು ಫಲ ಬರುವುದೆಂದು ದಾಸರು ಈ ಹಾಡಿನಲ್ಲಿ ಹೇಳಿದ್ದಾರೆ.

## ೯೧ನೆಯ ಹಾಡು

ಚಂಚಲವಾದ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸುವುದು ತುಂಬಾ ಕಷ್ಟವೆಂಬ ಮಾತನ್ನು ಈ ಹಾಡಿನಲ್ಲಿ ಹೇಳಲಾಗಿದೆ.

ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ॥ (ಭ. ಗೀ.)

## ೯೨ನೆಯ ಹಾಡು

ಅವಿವೇಕಿಯಾದ ಮನಸ್ಸನ್ನು ಕುರಿತು ದಾಸರು ಈ ಹಾಡನ್ನು ರಚಿಸಿರ-ಬಹುದು.

೧ **ಕಚ್ಚು-ಕದನತನ**=ಕಚ್ಚುತನ, ಕದನತನ.

೨ **ಕಲ್ಮಷ**=ಕೊಳೆ.

**ಕಾಮಿತಾರ್ಥ**=ಮೋಕ್ಷ.

೩ **ವರ್ತಿಸು**=ಅನುಸರಿಸು.

೪ **ಸ್ವಾಮ್ಯ**=ಅಧಿಕಾರ.

**ಭಾನುಮಂಡಲಮನೆಯ ಮುಟ್ಟು**=ಮೋಕ್ಷ ದೊರಕಿಸು.

ದ್ವಾವಿಮೌ ಪುರುಷೌ ಲೋಕೇ ಸೂರ್ಯಮಂಡಲಭೇದಿನೌ ।

(ಭಾ. ಉ.)

## ೯೩ನೆಯ ಹಾಡು

ದುರಾಚಾರದ ಮನಸ್ಸಿಗೆ ಒಂದೊಂದು ಪಾಪಕ್ಕೂ ನರಕದಲ್ಲಿ ಎಂತೆಂತಹ ಪ್ರಾಯಶ್ಚಿತ್ತವನ್ನು ಅನುಭವಿಸಬೇಕಾಗುವುದೆಂಬುದನ್ನು ದಾಸರು ಈ ಹಾಡಿನಲ್ಲಿ ವಿವರಿಸಿದ್ದಾರೆ.

೧ **ಕರ್ಮವಿಮೋಚನ**=ಮಾಡಬೇಕಾದ ಆಚಾರಗಳನ್ನು ಬಿಡುವುದು.

೪ **ಕಂಚು**=ಕನ್ನಡಿ.

**ಕಾಳಂಜಿ**=ಉಗುಳ್ತಟ್ಟೆ. (ಪೀಕ್‌ದಾನಿ).

೧೦ **ಕೊಂಡೆ**=ಚಾಡಿ.

## ೯೪ನೆಯ ಹಾಡು

ಭವದಲ್ಲಿ ಅಜ್ಞಾನದಿಂದ ಬಳಲುವ ಮಾನವರ ಮನಸ್ಸುಗಳಿಗೆ ದಾಸರು ಹೀಗೆ ಎಚ್ಚರಿಕೆಕೊಟ್ಟದ್ದಾರೆ.

೧ ಅಂಬರಕೇಳಿ=ಮಾಯಾಜಾಲ, ಕ್ಷಣಿಕಸುಖ.

೩ ಸಿಲುಕು=ತೊಡಕು.

೫ ತಿಂಡಿವಾಳ=ತಿನಿಸುಬಕ್ಕ.

## ೯೫ನೆಯ ಹಾಡು

ಪಂಚೇಂದ್ರಿಯಗಳ ಆಕರ್ಷಣೆಗೆ ಒಳಗಾಗುವ ಮನಸ್ಸನ್ನು ಕುರಿತು ಈ ಹಾಡಿನಲ್ಲಿ ಉಪದೇಶದ ಮಾತುಗಳಿವೆ.

೧ ರವ=ದನಿ.

೨ ಕುಳಿ=ತಗ್ಗು, ಕುಣಿ.

ಶ್ರೀಲಲನೇಶ=(ಶ್ರೀಲಲನಾ=ಲಕ್ಷ್ಮಿ). ವಿಷ್ಣು.

೪ ಪತಂಗ=ದೀಪದ ಹುಳು.

## ೯೬ನೆಯ ಹಾಡು

ಅವಿವೇಕದ ಅನಾಚಾರಗಳಿಗೆ ಪರಲೋಕದಲ್ಲಿ ದೊರೆಯುವ ಶಿಕ್ಷೆಗಳು ಎಂತಹವೆಂಬುದನ್ನು ಈ ಹಾಡಿನಲ್ಲಿ ವಿವರಿಸಿ ಹೇಳಲಾಗಿದೆ.

೧ ಎರೆದ=ಎರಕಹೊಯ್ದ.

ತಕ್ಕೈಸು=ಆಲಿಂಗಿಸು

೪ ಎಸೆ=ಒಗೆ.

ಅಶನಪ್ರಭೇದ=ಪಂತಿಯಲ್ಲಿ ಪರಪಂತಿ.

## ೩ ಭಾಗ್ಯ

### ೯೭ನೆಯ ಹಾಡು

ಸಿರಿವಂತಿಕೆ, ಅರಸನ ಪ್ರೀತಿ ಇವು ಯಾರಿಗೂ ಸ್ಥಿರವಲ್ಲವೆಂಬುದನ್ನು ಹೇಳಿ ದಾಸರು ಇವು ಇದ್ದಾಗಲೂ ಮಾನವನು ಮಾಡಬೇಕಾದುದೇನು? ಎಂಬುದನ್ನು ಈ ಹಾಡಿನಲ್ಲೆ ವಿವರಿಸಿದ್ದಾರೆ.

೧ **ಹೆಚ್ಚು**=ಒಣಪ್ರತಿಷ್ಠೆ.

**ಅವಗಡಿಸು**=ಕಾಡು, ಅಪಮಾನಿಸು.

೨ **ಸೊಡರು**=ದೀಪ.

೩ **ನಾಕೇಂದ್ರ**=ದೇವೇಂದ್ರ.

೪ **ಮಾಂಧಾತ :**

ಸೂರ್ಯಕುಲದ ಯುವನಾಶ್ವನ ಮಗ. ಯುವನಾಶ್ವನಿಗೆ ಅನೇಕ ಜನ ಹೆಂಡಿರಿದ್ದರೂ ಯಾರಲ್ಲಿಯೂ ಮಕ್ಕಳಾಗಿರಲಿಲ್ಲ. ಭೃಗುಋಷಿಯಿಂದ ಪುತ್ರಕಾ-ವೇಷ್ಟಿಯನ್ನು ಮಾಡಿಸಿದನು. ಪುತ್ರಪ್ರದವಾದ ಮಂತ್ರಗಳಿಂದ ಅಭಿಮಂತ್ರಿತವಾದ ಉದಕವನ್ನು ಇಟ್ಟಿದ್ದರು. ನೀರಡಿಸಿ ಯುವನಾಶ್ವನು ನೀರು ಕುಡಿಯಲು ಗರ್ಭ ನಿಂತಿತು. ಋಷಿಗಳು ಇವನ ಹೊಟ್ಟೆಯನ್ನು ಸೀಳಿ ಕೂಸನ್ನು ತೆಗೆದರು. ಇಂದ್ರನ ಕಿರುಬೆರಳನ್ನು ಚೀಪಿ ಬೆಳೆದವನಾದ್ದರಿಂದ ಇವನಿಗೆ ಮಾಂಧಾತ (ಧಾಸ್=ಚೀಪು) ನೆಂಬ ಹೆಸರು ಬಂದಿತು. ಇವನಿಗೆ ಇಂದ್ರನ ಅರ್ಧಾಸನವನ್ನು ಗೆಲ್ಲಬೇಕೆಂಬ ಅಹಂಕಾರ ಹುಟ್ಟಿ ಸ್ವರ್ಗದ ಮೇಲೆ ದಂಡೆತ್ತಿಹೋದನು. ಇಂದ್ರನು ಇವನನ್ನು ಲವಣಾಸುರನನ್ನು ಜಯಿಸಲಿಕ್ಕೆ ಹೇಳಲು, ಅವನೊಡನೆ ಯುದ್ಧಮಾಡಿ ಸತ್ತನು. (ಭಾರ. ವನ. ೧೨೭ ವಾಯು. ಪು. ೨–೨೯–೧೫೪) ಇವನಿಗೆ ಪುರುಕುತ್ಸ, ಅಂಬ-ರೀಷ, ಮುಚಕುಂದರೆಂಬ ಮಕ್ಕಳಿದ್ದರು.

### ೯೮ನೆಯ ಹಾಡು

ಈ ಮೇಲಿನ ಹಾಡಿನ ವಿಚಾರವನ್ನೇ ಇದರಲ್ಲಿ ಮುಂದುವರಿಸಿದ್ದಾರೆ.

೧ **ಕೊ**=ತೆಗೆದುಕೊ.

### ಹರಿಶ್ಚಂದ್ರ :

ಈತನು ಸೂರ್ಯವಂಶದ ತ್ರಿಶಂಕು-ಸತ್ಯವ್ರತೆಯರ ಮಗ. ವಸಿಷ್ಠನು ಈತನ ಪುರೋಹಿತ. ಶೈಬ್ಯಕನ್ನೆಯಾದ ತಾರಮತಿ ಇವನ ಹೆಂಡತಿ. ರೋಹಿತನೆಂಬವನು ಇವನ ಮಗ. ವಚನಪಾಲನೆಗಾಗಿ ಈತನು ಹೆಸರಾಗಿದ್ದಾನೆ. ವಿಶ್ವಾಮಿತ್ರಋಷಿಯ ಮೂಲಕ ರಾಜ್ಯಭ್ರಷ್ಟನಾಗಿ, ಪತ್ನಿ-ಪುತ್ರರೊಂದಿಗೆ ಕಾಶೀಪಟ್ಟಣ ಸೇರಿ, ಹೆಂಡತಿಯನ್ನು ಕಾಲಕೌಶಿಕನೆಂಬ ಬ್ರಾಹ್ಮಣನಿಗೆ ಮಾರಿದನು. ಅಲ್ಲದೆ ತನ್ನನ್ನು ವೀರಬಾಹುವೆಂಬ ಚಾಂಡಾಲನಿಗೆ ಮಾರಿಕೊಂಡು ಶ್ಮಶಾನದ ಕಾವಲುಗಾರನಾಗಿ ಅನೇಕ ಕಷ್ಟಗಳನ್ನು ಅನುಭವಿಸಿ ಪರಮೇಶ್ವರನ ಅನುಗ್ರಹದಿಂದ ತನ್ನ ರಾಜ್ಯವನ್ನು ಪಡೆದು ಪತ್ನಿ-ಪುತ್ರರೊಂದಿಗೆ ಸುಖದಿಂದ ಬಾಳಿದನು.

( ಭಾರ. ಸಭಾ. ೧೨; ವನ ೭೭ ).

೪ **ಕಾಳಬೆಳದಿಂಗಳು**=ಕೃಷ್ಣಪಕ್ಷದ ಬೆಳುದಿಂಗಳು, ಕ್ಷಣಿಕವಾದದ್ದು.

## ೯೯ನೆಯ ಹಾಡು

ಸಿರಿವಂತಿಕೆ ಅಸ್ಥಿರವೆಂಬುದನ್ನು ಮತ್ತು ಸಿರಿವಂತಿಕೆ ಅವಿವೇಕಕ್ಕೆ ಗುರಿಮಾಡುವುದೆಂಬುದನ್ನು ಈ ಹಾಡಿನಲ್ಲಿ ದಾಸರು ಹೇಳಿದ್ದಾರೆ.

೧ **ರೊಕ್ಕ**=(ತ್ಸ–ರೋಕ) ಹಣ.

## ೧೦೦ನೆಯ ಹಾಡು

ಈ ಹಾಡಿನಲ್ಲಿ ಮನುಷ್ಯನನ್ನು ಮರುಳುಗೊಳಿಸಿ ಅವಿವೇಕಕ್ಕೆ ತೊಡಗಿಸುವ ಹೆಣ್ಣು ಹೊನ್ನು-ಮಣ್ಣು ಈ ಮೂರರ ವ್ಯರ್ಥ್ಯವನ್ನು ವಿಶದವಾಗಿ ಉದಾಹರಣೆಗಳೊಂದಿಗೆ ದಾಸರು ಹೇಳಿದ್ದಾರೆ.

## ೧೦೧ನೆಯ ಹಾಡು

ಸಂಪತ್ತಿನ ಉಪಾಧಿ ಒಳ್ಳೆಯುದಲ್ಲವೆಂಬುದನ್ನು ದಾಸರು ತಮ್ಮ ಈ ಲಂಗೋಟಿಯ ಪದದಲ್ಲಿ ವಿನೋದವಾಗಿ ವಿವರಿಸಿದ್ದಾರೆ.

೧ ಲಂಗೋಟಿ=(ತ್ಸ=ಲಿಂಗ+ಪಟ್ಟಿಕಾ)

೨ **ಜಿತಮನ**=ಮನಸ್ಸನ್ನು ಗೆದ್ದವರು.

೫ **ದೃಢಭಕ್ತ........ಧರಿಸಿದಂಥ** :

ವಾಮನಾವತಾರದಲ್ಲಿ ಬ್ರಹ್ಮಚಾರಿಯಾಗಿ ಲಂಗೋಟಿ ಧರಿಸಿದ್ದನು.

### ೧೦೨ನೆಯ ಹಾಡು

ಗಳಿಸಿದರೆ ಇಂತಹ ಧನವನ್ನು ಗಳಿಸಬೇಕೆಂದು ದಾಸರು ಈ ಹಾಡಿನಲ್ಲಿ ಭಕ್ತಿ-ಜ್ಞಾನ-ವೈರಾಗ್ಯಗಳನ್ನು ಎತ್ತಿಹೇಳಿದ್ದಾರೆ.

೩ **ಪ್ರಜ್ಞೆ**=ಜ್ಞಾನ.

## ೪ ಹೆಣ್ಣು

### ೧೦೩ನೆಯ ಹಾಡು

ದಾಸರು ಈ ಉಗಾಭೋಗದಲ್ಲಿ ಕರ್ತವ್ಯನಿರತಳಾದ ಗೃಹಿಣಿಯ ಮಹತ್ತ್ವವನ್ನು ಪರ್ಯಾಯವಾಗಿ ಹೇಳಿದ್ದಾರೆ.

### ೧೦೪ನೆಯ ಹಾಡು

ಹೆಣ್ಣನ್ನು ಕೇವಲ ಕಾಮದ ಕಣ್ಣುಗಳಿಂದಲೇ ನೋಡಬೇಡ. ಅಕ್ಕ-ತಂಗೆ-ತಾಯಿ-ಮಗಳು ಮುಂ. ಹೀಗೆ ವಿವಿಧರೂಪದಿಂದ ಹೆಣ್ಣು ನಿನ್ನ ಮನಸ್ಸನ್ನು ತಣಿಸುವುದು— ಎಂದು ದಾಸರು ಹೆಣ್ಣು-ಗಂಡಿನ ಒಂದು ಸಮಸ್ಯೆಯನ್ನೇ ಈ ಹಾಡಿನಲ್ಲಿ ಬಿಡಿಸಿದ್ದಾರೆ.

೧ **ಜಾಯ**=ಹೆಂಡತಿ.

೩ **ಒಗಡಿಸು**=ಧಿಕ್ಕರಿಸು, ಹೇಸು.

೪ **ಶಶಿ........ವಿಹುದು** :

ಗುರು-ಪತ್ನಿಯಾದ ತಾರಾದೇವಿಯೊಡನೆ ಸಂಬಂಧ ಬಂದುದಕ್ಕಾಗಿ ಗುರುಶಾಪದಿಂದ ಚಂದ್ರನು ಕ್ಷಯರೋಗಿಯಾದ ಕಥೆ ಅನೇಕ ಪುರಾಣಗಳಲ್ಲಿ ಬರುತ್ತದೆ.

೫ **ಪಶುಪತಿಯು ದೆಸೆಗೆಡಿಸಿಹುದು**=ವಿಷ್ಣುವಿನ ಮೋಹಿನೀರೂಪ.

## ೧೦೫ನೆಯ ಹಾಡು

ಮೇಲಿನ ಪದ್ಯದ ಭಾವವೇ ಇದರಲ್ಲಿ ಮುಂದುವರಿದಿದೆ.

## ೧೦೬ನೆಯ ಹಾಡು

ಈ ಹಾಡಿನಲ್ಲಿ ದಾರಿತಪ್ಪಿ ನಡೆಯುವ ಹೆಣ್ಣಿನ ಸ್ವಭಾವವನ್ನು ದಾಸರು ತುಂಬ ಸೂಕ್ಷ್ಮವಾಗಿ ಚಿತ್ರಿಸಿ ತೋರಿಸಿದ್ದಾರೆ.

೧ **ಪರದೇಶಿ**=ದಿಕ್ಕಿಲ್ಲದವಳು.

**ಮುಕ್ಕಮಾರಿ**=ಒಂದು ಜಾತಿಯ ದೆವ್ವ.

೨ **ನೆತ್ತಿಗೆ............ಊಡುವಳು**=ಮೆಚ್ಚುಮದ್ದು ಮಾಡು, ತಲೆಗೆ ತಿಕ್ಕು.

**ಊಡು**=ಉಣ್ಣಿಸು.

೩ **ಒರಲು**=ಕೂಗು, ಒದರು.

೪ **ಕರಿರೂಪ**=ಅಶುಭ ಸ್ವರೂಪದವಳು.

## ೧೦೭ನೆಯ ಹಾಡು

ಉಂಡತನದಿಂದ ನಡೆಯುವ ಹೆಂಡತಿಯನ್ನು ಗಂಡನು ಬುದ್ಧಿವಂತಿಕೆಯಿಂದ ಆಳಬೇಕೆಂದು ದಾಸರು ಸ್ಪಷ್ಟವಾದ ಮಾತುಗಳಲ್ಲಿ ಹೀಗೆ ಹೇಳಿದ್ದಾರೆ.

೧ **ಆಜ್ಞೆ**=ಕಟ್ಟಳೆ.

**ಝುಂಕಿಸು**=ತಿರಸ್ಕರಿಸು.

೨ **ಮಾರು-ಮುಲಕು**=ಹೆಚ್ಚುಕಡಿಮೆ ಮಾಡು.

## ೧೦೮ನೆಯ ಹಾಡು

ಪರಸತಿಯರನ್ನು ನಂಬಿ ಅವಳಿಗಾಗಿ ಹಂಬಲಿಸಿ 'ನೀನು ಹಾರೈಸಬೇಡ' ಎಂಬ ನೀತಿಯ ನಿಜವನ್ನು ದಾಸರು ಇದರಲ್ಲಿ ಅನೇಕ ಲೋಕಾನುಭವಗಳೊಂದಿಗೆ ಹೇಳಿದ್ದಾರೆ.

೧ **ಬಯಲುಡಂಭಕ**=ಹುರುಳಿಲ್ಲದ್ದು.

೨ **ಪಾಟಬದ್ಧ**=(ಪಾಟ+ಅಬದ್ಧ)=ನಿಶ್ಚಿತರೀತಿಯ ಜೀವನವಿಲ್ಲದ.

**ಜಾತಿಕಾರ್ತಿ**=ಜಾತಿಗಾರತಿ, ಬಹು ರೂಪಿಣಿ.

೩ **ಗುರುಳೆ**=ಗುಳ್ಳೆ.

## ೧೯ನೆಯ ಹಾಡು

ಈ ಕೀರ್ತನೆಯಲ್ಲಿ ಪತಿಭಕ್ತಿಯಿಲ್ಲದ ತುಂಡುಸತಿಯ ಸ್ವಭಾವವನ್ನು ದಾಸರು ಸ್ಪಷ್ಟವಾಗಿ ಚಿತ್ರಿಸಿದ್ದಾರೆ.

೧ **ವ್ರತಗೆಟ್ಟು**=ಬತಿಗೆಟ್ಟು.

**ಕೊಂಡಾಡಿ**=(ಕೊಂಡು+ಆಡಿ)=ಬಳಸಿ.

**ಮಾರ್ಮಲೆ**=ವಿರೋಧಿಸು.

೩ **ತುಡು**=(ತೊಡು)=ಧರಿಸು.

೫ **ಕಷ್ಟಸೆರೆ**=ದುಃಖ ಮತ್ತು ಬಂಧನ.

## ೧೧೦ನೆಯ ಹಾಡು

ಬಹುಜನರ ದಾಂಪತ್ಯದಲ್ಲಿಯ ವಿರಸವನ್ನು ನೋಡಿದ ದಾಸರು, ಗಂಡಿನ ಸ್ತ್ರೈಣವೃತ್ತಿಯಿಂದಲೇ ಹೆಣ್ಣು ಬುದ್ಧಿಗೇಡಿಯಾಗಿ ಸಂಸಾರ ವಿರಸವಾಗುವುದೆಂಬುದನ್ನು ಅರಿತಿದ್ದಾರೆ. ಈ ಅರಿವೆಯಿಂದಲೇ ಅವರು ಜನರಿಗೆ ಹೀಗೆ ಹೇಳುತ್ತಾರೆ.

೪ **ಮುಂಡೆ ಕೆದರಿಕೊಂಡು**=ರಕ್ಕಸತನದಿಂದ.

## ೫  ಸಂಗ-ಸಹವಾಸ

## ೧೧೧ನೆಯ ಹಾಡು

ಅಜ್ಞಾನಿಯಾದ ಅಧಮನ ಸಂಗದ ರೀತಿ-ನೀತಿಗಳನ್ನು ಈ ಹಾಡಿನಲ್ಲಿ ಅನೇಕ ಉದಾಹರಣೆಗಳೊಂದಿಗೆ ವಿವರಿಸಲಾಗಿದೆ.

೧ **ಗಂಜಲ**=ರೊಜ್ಜು.

೨ **ಚೀನಿಕೋಲು**=ಕಬ್ಬಿನ ಗಳ.

೩ **ಅಂತರ**=ನೀರಿನ ಶುದ್ಧಾಶುದ್ಧತೆ.

## ೧೧೨ನೆಯ ಹಾಡು

ಅಲ್ಪನ ಜೊತೆಯ ಸಹವಾಸ ಒಳ್ಳೆಯುದಲ್ಲವೆಂಬುದನ್ನು ದಾಸರು ಈ ಹಾಡಿನಲ್ಲಿ ಹೇಳಿದ್ದಾರೆ.

೩ **ನೆಲೆತಪ್ಪು**=ಸ್ಥಿತಿಗೆಡು, ದಶೆಗೆಡು.

## ೧೧೩ನೆಯ ಹಾಡು

ಇದರಲ್ಲಿಯೂ ಅಜ್ಞಾನಿಗಳ ಸಂಗದ ವಿಚಾರವನ್ನೇ ಹೇಳಿರುವರಾದರೂ ಸುಜ್ಞಾನಿಗಳ ಒಡನಾಟದ ಸೌಖ್ಯವನ್ನು ಆನುಷಂಗಿಕವಾಗಿ ಹೇಳಿದ್ದಾರೆ.

೨ **ಒಡಲ ಹಂಗಿಸು**=ಊಟವನ್ನೆಣಿಸು.

## ೧೧೪ನೆಯ ಹಾಡು

ಈ ಹಾಡಿನಲ್ಲಿ ದಾಸರು ದುರ್ಜನನನ್ನು ಅನೇಕ ಉಪಮೆಗಳಿಂದ ಬಣ್ಣಿಸಿ ಹೇಳಿದ್ದಾರೆ.

೧ **ವಿಷಮರು**=ದುರ್ಜನರು.

೩ **ಬಿನ್ನಣ (ವಿಜ್ಞಾನ)**=ಜಾಣತನ.

# ೫ ಸಾಮಾನ್ಯನೀತಿ

ಈ ಭಾಗದಲ್ಲಿ ಮಾನವನು ಲೌಕಿಕದಲ್ಲಿಯೂ ಆದರ್ಶವಾದಿಯಾಗಿ ಹೇಗೆ ಬಾಳಬೇಕೆಂಬುದನ್ನು ದಾಸರು, ವಿವಿಧರೀತಿಗಳಲ್ಲಿ ಜೀವನವನ್ನು ವಿಶ್ಲೇಷಿಸಿ ಹೇಳಿದ್ದಾರೆ.

## ೧೧೫ನೆಯ ಹಾಡು

ಮೂರ್ಖನೆಂದೂ ಪಂಡಿತನಿಗೆ ಹೇಳಬೇಕೆಂಬುದನ್ನು ಈ ಹಾಡಿನಲ್ಲಿ ವಿವರವಿವರವಾಗಿ ಹೇಳಲಾಗಿದೆ.

೧ **ಕಾಕುದೇವತೆ**=ಕ್ಷುದ್ರದೇವತೆ. ಕರೆಪ್ಪ ನೋ.

**ಗಂಟು**=ಗಳಿಸಿದ ಹಣ.

**ಜನಕಂಟಕ**=ಸಮಾಜಘಾತಕಿ.

೨ **ಗಾರುಡ**=ಮೋಡಿವಿದ್ಯೆ.

೫ **ಹೇಮ**=ಸಂಪತ್ತು.

ವಿ. ಸೂ:—ಈ ನುಡಿಯ ಕೊನೆಯ ಚರಣದ ಪ್ರಾಸ ತಪ್ಪಿದೆ.

೬ **ಕೊಂಡೆ**=ಚಾಡಿ.

## ೧೧೬ನೆಯ ಹಾಡು

ವಿವೇಕದಂತಹ ಒಳ್ಳೆಗುಣದ ಸಾಧನವಿದ್ದರೂ ಅದನ್ನು ಕಡೆಗಣಿಸಿ ನೀನು ಮೂರ್ಖನಾದೆಯೇಕೆ?—ಎಂದು ದಾಸರು ಮಾನವನನ್ನು ಕೇಳಿದ್ದಾರೆ.

೧ **ರೊಕ್ಕ**=(ತ್ಸ-ರೋಕ=ಕ್ರಯ.).

೨ **ಕಕ್ಕಸ**=(ತ್ಸ-ಕರ್ಕಶ).

## ೧೧೭ನೆಯ ಹಾಡು

ವೇಷಧಾರಿಗಳಾದ ವೇದಾಂತಿಗಳು ಎಲ್ಲವನ್ನೂ ಬಲ್ಲೆವೆಂದು ಬಾಯಿಂದ ಏನೋ ಹೇಳುವರು. ಆದರೆ ಸಲ್ಲದ ಅವಗುಣಗಳಿಂದ ತುಂಬಿಕೊಂಡಿರುವರು. ಇದನ್ನು ಕಂಡ ಪುರಂದರದಾಸರು ಅಂತಹ ಸೋಗುಗಾರರಿಗೆ ಈ ಹಾಡಿನಲ್ಲಿ ಚಾಟಿಯ ಏಟನ್ನು ಕೊಟ್ಟಿದ್ದಾರೆ.

**ಕೇಮೆ**=ಕಾವೆ.

**ತಾಮಸ**=ದುರ್ಗುಣ.

## ೧೧೮ನೆಯ ಹಾಡು

ಯಾವಯಾವ ಗುಣಾವಗುಣಗಳಿಗೆ ಎಂತೆಂತಹ ಫಲಗಳೆಂಬುದನ್ನು ಈ ಉಗಾಭೋಗದಲ್ಲಿ ಹೇಳಲಾಗಿದೆ.

೧ **ಕಿಂಕರ**=ಹರಿಭಕ್ತ.

**ಮಂಕು**=ಬುದ್ಧಿಗೇಡಿ.

**ಕಷ್ಟರು**=ಕಠಿಣಹೃದಯದವರು.

## ೧೧೯ನೆಯ ಹಾಡು

ಹರಿಭಕ್ತಿಯನ್ನು ಬಿಟ್ಟು ಲೌಕಿಕದ ಅಡ್ಡದಾರಿಯಿಂದ ನಡೆಯುವವರನ್ನು ಈ ಉಗಾಭೋಗದಲ್ಲಿ ದಾಸರು ಎರಡು ದೃಷ್ಟಾಂತಗಳಿಂದ ಬೀಳುಗಳೆದಿದ್ದಾರೆ.

೧ **ಪಟ್ಟಾವಳಿ**=ರೇಶ್ಮೆಬಟ್ಟೆ.

## ೧೨೦ನೆಯ ಹಾಡು

ಶ್ರೀಹರಿಯ ಪಾದಗಳನ್ನು ನಂಬದವನು ಕೆಟ್ಟನು — ಎಂಬುದನ್ನು, ಇಲ್ಲಿ ಅನೇಕ ದೀಪಕಗಳೊಂದಿಗೆ ದಾಸರು ಹೇಳಿದ್ದಾರೆ.

೧ **ಅಲ್ಲೆ**=ಸಲಿಗೆ.

**ಮೆಲ್ಲಡಿ**=ಮೃದುವಾದ ಪಾದ.

**ನರಗೇಡಿ**=ಮನುಷ್ಯರಲ್ಲಿ ಕೀಳ.

( ೧೨೧ರ ವಿಷಯ ಬರೆದಿಲ್ಲ. )

## ೧೨೨ನೆಯ ಹಾಡು

ಸಿರಿ ಬಂದಾಗ ಸೊಕ್ಕಿ ನಡೆಯಬಾರದೆಂಬುದನ್ನು ಈ ಹಾಡಿನಲ್ಲಿ ವಿವರಿಸಲಾಗಿದೆ.

೧ **ಬಿರಿದುಬಿರಿದು**=ಉಬ್ಬಿಉಬ್ಬಿ.

**ನೋಲಕ್ಕೆ ಮಾಳ್ಪರು**=ಸಿಡಿದು ತಿರುಗಾಡುವರು.

೩ **ಭೂಪಾರ**=ಭೂಮಂಡಲ.

## ೧೨೩ನೆಯ ಹಾಡು

ನಿಂದೆಮಾಡುವುದು ಆತ್ಮವಿಘಾತಕವೆಂಬುದನ್ನು ಈ ಹಾಡಿನಲ್ಲಿ ದಾಸರು ಹೇಳಿದ್ದಾರೆ.

೧ **ತೋಡು**=ಹಂಚಿಕೆ.

## ೧೨೪ನೆಯ ಹಾಡು

ಸಂಸಾರವು ಅಸ್ಥಿರವೆಂಬುದನ್ನು ದಾಸರು ಈ ಹಾಡಿನಲ್ಲಿ ತುಂಬ ಪರಿಣಾಮಕಾರಕವಾದ ರೀತಿಯಲ್ಲಿ ಹೇಳಿದ್ದಾರೆ.

೪ **ಕಂಟಕ**=ಸಾವು.

**ಕುಂಟೆ**=ಕಟ್ಟಿಗೆತುಂಡು.

## ೧೨೫ನೆಯ ಹಾಡು

ಜೀವನದಲ್ಲಿ ಮನುಷ್ಯನು ಯಾವಯಾವ ಕರ್ಮಗಳನ್ನು ಮಾಡಬೇಕು? ಯಾವುದನ್ನು ಮಾಡಬಾರದು?—ಎಂಬುದನ್ನೆಲ್ಲ ದಾಸರು ಇಲ್ಲಿ ಹೇಳಿ ಲೋಕಕ್ಕೆ ಎಚ್ಚರಿಕೆಕೊಟ್ಟಿದ್ದಾರೆ.

೧ **ನಟನೆ**=ಸೋಗು, ವೇಷ.

೨ **ಟವಳಿ**=ಮೋಸ.

## ೧೨೬ನೆಯ ಹಾಡು

ಇದರಲ್ಲಿ ಶುದ್ಧ ಲೌಕಿಕನೀತಿಯ ವಿಚಾರಗಳು ಬಂದಿವೆ.

೧ **ಅಡಿ**=ತಳ.

೩ **ಪಾಪಿ**=ದುಷ್ಟ ಹೇತುವುಳ್ಳವರು.

**ಪರಬ್ರಹ್ಮರೂಪ**=ಶ್ರೀಹರಿ.

## ೧೨೭ನೆಯ ಹಾಡು

ಸರ್ವೋತ್ತಮನಾದ ಶ್ರೀಹರಿಯ ಉಪಾಸಕರಾದ ದಾಸರು ಜ್ಞಾನಿಗಳೂ ಅಹುದು. ಕ್ಷುದ್ರದೇವತೆಗಳನ್ನು ಪೂಜೆಮಾಡುವುದರಿಂದ ಯಾವ ಉಪಾಧಿಗಳೂ ಬಿಡಲಾರವಿಷ್ಟೇ ಅಲ್ಲ, ಹೆಚ್ಚಿನ ಉತ್ಪಾತಗಳು ಪ್ರಾಪ್ತವಾಗುವುವು—ಎಂಬುದನ್ನು ಅರಿತು, ಈ ಹಾಡಿನಲ್ಲಿ ರೂಢಿಯಲ್ಲಿರುವ ಕ್ಷುದ್ರದೇವತೆಗಳ ಪೂಜಾಸಂಪ್ರದಾಯವನ್ನು ಬಿಚ್ಚುಮಾತಿನಿಂದ ತಿರಸ್ಕರಿಸಿ ಹೇಳಿದ್ದಾರೆ.

೧ **ತಾಳಿ**=ಹೆಣ್ಣು ದೇವತೆಗಳ ಹೆಸರಿನಲ್ಲಿ ಕಟ್ಟಿಕೊಳ್ಳುವ ಹೊಂದಗಡು.

**ಎಲ್ಲಮ್ಮ**=ಸವದತ್ತಿ ಮುಂ. ಕಡೆಗಳಲ್ಲಿರುವ ಪ್ರಸಿದ್ಧ ದೇವತೆ.

**ಎಕಲಾತಿ**=ಎಲ್ಲಮ್ಮನ ಪರಂಪರೆಯಲ್ಲಿಯ ದೇವತೆ.

**ಉಡಚಮ್ಮ**=ಕಾಮರೋಗಗಳ ದೇವತೆ. ಮುನವಳ್ಳಿ (ಬೆಳಗಾಂವಿ) ಕೋಟೆಯಲ್ಲಿರುವ ಈ ದೇವತೆ ಪ್ರಸಿದ್ಧವಾಗಿದೆ.

**ಮಹಿಷಾಸುರ**=ದುರ್ಗಾದೇವತೆ ಕೊಂದ ರಾಕ್ಷಸನ ಹೆಸರು.

(ಮ್ಹಸೋಬಾ ಎಂಬ ದೇವರು ಮಹಾರಾಷ್ಟ್ರದಲ್ಲಿ ಹೆಸರಾಗಿದೆ.)

೨ **ಕೊರಳೊಳು........ಎನುತಲಿ**=ಎಲ್ಲಮ್ಮ ಮತ್ತು ತುಳಜಾಪುರದ ಅಂಬಾಭವನಿಯ ಭಕ್ತರು ಧರಿಸುವ ಆಭರಣಗಳು.

೩ **ಸಿಡಿಯ ಮುಳ್ಳು** :

ಮೈಲಾರಲಿಂಗನ ಹೆಸರಿನಲ್ಲಿ ಮಾಡುವ ಒಂದುಬಗೆಯ ಕ್ರೂರವಾದ ವ್ರತ. ಇದರಲ್ಲಿ, ಹರಕೆಹೊತ್ತವನು ಎತ್ತರವಾದ ಚಾಕಟ್ಟಿಗೆ ಬಡಿದ ಡೊಂಕು ಹಾಗು ಚೂಪಾದ ಮೊಳೆಯನ್ನು ಬೆನ್ನಹುರಿಗೆ ಚುಚ್ಚಿಕೊಂಡು ತೂಗಾಡುವನು. ಇದು ಇನ್ನೂ ಸಿಂಹಳದ್ವೀಪದಲ್ಲಿ ಪ್ರಚಲಿತವಿದೆ.

೪ **ಕೆಂಡರೊಟ್ಟಿ**=ಕೆಂಡದ ಮೇಲೆ ಬೇಯಿಸುವ ರೊಟ್ಟಿ.

ವಿ. ಸೂ:—ಗಣೇಶಚವತಿಯ ಮರುದಿನ ಸಣ್ಣ ಕೆಂಡರೊಟ್ಟಿ ಮಾಡಿ ಇಲಿಗೆ ನೈವೇದ್ಯವಿಡುವ ರೂಢಿ ಇನ್ನೂ ನಡೆದಿದೆ.

೫ **ಚಿನ್ನ**=ಮಿಡಿ.

೭ **ದಿನಪಸುತ**=ಸೂರ್ಯನ ಮಗ=ಯಮ.

**ಪಲ್ಲೆಯುವ ಬೀರಿ**=ಪಲ್ಲೆಯದ ಹಬ್ಬಮಾಡಿ.

೮ **ಸೀರೆಯ ಕಳೆದಿಟ್ಟು**=ಹುಟ್ಟಿಗೆಯುಟ್ಟುಕೊಂಡು.

೯ **ಬುಕ್ಕಿಟ್ಟು ಲಾಡಿ**=ಮುಸಲ್ಮಾನರ ಪರಂಪರೆ ಸೇರಿಕೊಂಡ ಹಬ್ಬ.

೧೦ ಅಗಸನ ಹೆಂಡತಿಯು ರೊಟ್ಟಿಯನ್ನು ತಂದು ಮನೆಯ ನಡುಗಂಬದ ಬಳಿಯಲ್ಲಿಟ್ಟು ಪೂಜೆಮಾಡುವ ಸಂಪ್ರದಾಯವು ಕೆಲವು ಶಿಷ್ಟಮನೆತನಗಳಲ್ಲಿ ನಡೆದುಬಂದಿದೆ.

## ೧೨೮ನೆಯ ಹಾಡು

ಇಹಜನ್ಮದ ಕರ್ಮಗಳೇ ಈ ಜನ್ಮದ ಸದ್ಗತಿ-ದುರ್ಗತಿಗಳಿಗೆ ಕಾರಣವಾಗುವು-ವೆಂದು ದಾಸರು ಈ ಹಾಡಿನಲ್ಲಿ ಹೇಳಿದ್ದಾರೆ.

೧ **ನಡೆವಳಿ**=ಆಚಾರ.

೨ **ಜ್ವರದ ಗುಲ್ಮ**=ಮಲೇರಿಯದ ಜ್ವರದ ಗಡ್ಡೆ.

## ೧೨೯ನೆಯ ಹಾಡು

ಈ ಚಿಕ್ಕ ಉಗಾಭೋಗದಲ್ಲಿ ಸಾಮಾನ್ಯ ಮಾನವಸ್ವಭಾವವನ್ನು ಹಿಂಜಿ-ತೋರಿಸಿ, ಅದು ತಪ್ಪೆಂದು ಹೇಳಿ, ತಪ್ಪಿಗೆ ತಕ್ಕ ಪ್ರಾಯಶ್ಚಿತ್ತವನ್ನು ಇಲ್ಲಿ ದಾಸರು ಹೇಳಿದ್ದಾರೆ.

೧ **ವಿಕಲ**=ದೃಢಮನಸ್ಸಿಲ್ಲದೆ, ಅಸ್ಥಿರನಾಗಿ.

## ೧೩೦ನೆಯ ಹಾಡು

ಎಂತಹ ಸ್ಥಳದಲ್ಲಿ ಸಾಧಕನು ಇರಬಾರದೆಂಬುದನ್ನು ದಾಸರು ಈ ಹಾಡಿನಲ್ಲಿ ಹೇಳಿದ್ದಾರೆ.

೧ **ಕರುಬ**=ಹೊಟ್ಟೆಕಿಚ್ಚಿನವ.

೨ **ಅರ್ಥ**=ಪುರುಷಾರ್ಥ.

## ೧೩೧ನೆಯ ಹಾಡು

ಇದೇ ನೀತಿಯನ್ನೇ ಈ ಹಾಡಿನಲ್ಲಿ ಮುಂದುವರಿಸಿದ್ದಾರೆ.

೧ **ಮುಮ್ಮೊಳೆ**=ಹದನಾದ ಮೊಳೆ.

## ೧೩೨ನೆಯ ಹಾಡು

ಸಾಮಾನ್ಯ ಜನರು ನಿಂದಕರಿಂದ ದೂರವಿರಬೇಕೆಂದು ಬಯಸುತ್ತಿದ್ದರೂ, ದಾಸರು ಅಂತಹ ನಿಂದಕರು ಯಾವಾಗಲೂ ಹತ್ತಿರದಲ್ಲಿಯೇ ಇರಬೇಕು ಎಂಬು-ದನ್ನು ಸಿದ್ಧಗೊಳಿಸಿದ್ದಾರೆ.

## ೧೩೩ನೆಯ ಹಾಡು

ಎಂತಹರ ಸಹವಾಸವನ್ನು ಮಾಡಬೇಕೆಂಬುದನ್ನು ದಾಸರು ತುಂಬ ಹರಿತ-ವಾದ ಮಾತುಗಳಲ್ಲಿ ಹೇಳಿದ್ದಾರೆ.

೨ ಪ್ರಸಂಗ=ಮಾತುಕಥೆ.

ಕುಮಂತ್ರ=ದುರಾಲೋಚನೆ.

೩ ವಟವಟ ಮಾತು=ವ್ಯರ್ಥಮಾತು.

## ೧೩೪ನೆಯ ಹಾಡು

ಹರಿಭಜನೆಯಿಲ್ಲದವನು ಯಾವ ವ್ರತಾಚರಣೆಗಳನ್ನು ಮಾಡಿದರೂ ವ್ಯರ್ಥ-ವಾಗುವುವೆಂಬ ಮಾತನ್ನು ಇಲ್ಲಿ ಸ್ಪಷ್ಟವಾದ ಮಾತುಗಳಲ್ಲಿ ದಾಸರು ಹೇಳಿದ್ದಾರೆ.

೧ ಎರಕ=ಸ್ನೇಹ.

೩ ಅವಧೂತ=ಎಲ್ಲವನ್ನೂ ತೊರೆದವ.

## ೧೩೫ನೆಯ ಹಾಡು

ಲೋಕದಲ್ಲಿಯ ಸಾಮಾನ್ಯಜನರ ಜೀವನವನ್ನು ನೋಡಿ ದಾಸರು ತಮ್ಮಲ್ಲಿ ತಾವೇ ನಗುತ್ತಲಿದ್ದಾರೆ.

೩ ಪುಂಜ=ಸಮೂಹ.

## ೧೩೬ನೆಯ ಹಾಡು

ಕಾಮುಕ ಮೂಲಕವಾಗಿ ಲೋಕವೆಲ್ಲವೂ ಕೆಟ್ಟುಹೋದುದನ್ನು ಕಣ್ಣಾರೆಕಂಡ ದಾಸರು ಅದರ ವಿವರಗಳನ್ನು ಹೇಳುತ್ತಾರೆ.

೧ ಅಟ್ಟುಳಿ=ಉಪದ್ರವ.

೨ ಲಂಪಟತನ=ಆಸಕ್ತಿ.

ಸುಳಿ=ಶಿಸುಗಣಿ.

೩ ಓಲಾಟ=ಹಾರಾಟ.

## ೧೩೭ನೆಯ ಹಾಡು

ವಿವಿಧ ಜೀವನನೀತಿಗಳನ್ನು ಈ ಹಾಡಿನಲ್ಲಿ ಹೇಳಿದ್ದಾರೆ.

೧ **ಪದುಮಿನಿ**=ಒಳ್ಳೆ ಸುಂದರಿಯರಲ್ಲಿ ಪದ್ಮಿನಿ ಶ್ರೇಷ್ಠವರ್ಗದವಳು.

೨ **ರೀತಿ**=ಮಾನ-ಮರ್ಯಾದೆ.

೪ **ಕ್ಷಣಚಿತ್ತ**=ಒಂದು ಕ್ಷಣವಾದರೂ ದೃಢಮನಸ್ಸಿಲ್ಲದವ.

## ೧೩೮ನೆಯ ಹಾಡು

ಈ ಹಾಡಿನಲ್ಲಿ ವಿವಿಧ ಉಪಮೆಗಳೊಂದಿಗೆ ದಾಸರು ಲೋಕನೀತಿಯನ್ನು ತಿಳಿಸಿದ್ದಾರೆ.

೧ **ಕರೆಹ**=ಹಿಂಡುವಿಕೆ.

೩ **ಖಂಡೆಯ**=ಕತ್ತಿ.

## ೧೩೯ನೆಯ ಹಾಡು

ಹಿಂದಿನ ಹಾಡಿನಂತಹ ಲೋಕನೀತಿಯೇ ಈ ಹಾಡಿನಲ್ಲಿಯೂ ಮುಂದುವರಿದಿದೆ.

೩ **ನಾಡ**=ಸಾಮಾನ್ಯ.

## ೧೪೦ನೆಯ ಹಾಡು

ಇದರಲ್ಲಿಯೂ ಲೋಕನೀತಿ ಮುಂದುವರಿದಿದೆ.

೨ **ಬಧಿರ**=ಕಿವುಡ.

೩ **ಅಜ**=ಬ್ರಹ್ಮ.

**ಭುಜಗೇಂದ್ರ**=ಶೇಷ.

## ೧೪೧ನೆಯ ಹಾಡು

ಶುದ್ಧ ಮಾನವನೀತಿಯನ್ನು ದಾಸರು ಈ ಹಾಡಿನಲ್ಲಿ ಪವಣಿಸಿದ್ದಾರೆ.

೧ **ಕುಟಿಲ**=ಕುಟಿಲತನ, ವಂಚನೆ.

**ಸಟೆ**=ಸುಳ್ಳು.

೩ **ಕುಪಿತ**=ಸಿಟ್ಟು.

ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ ॥ (ಭ. ಗೀ.)

## ೧೪೨ನೆಯ ಹಾಡು

ನೀತಿಯನ್ನು ಬೋಧಿಸುವಾಗ ದಾಸರು ಬಳಸಿದ ಮಾತಿನ ಚಮತ್ಕೃತಿಗಳನ್ನು ಈ ಹಾಡಿನಲ್ಲಿ ನೋಡಬಹುದು.

೧ **ಉಪಕಾರ**=ಪ್ರತಿಬಿಂಬಿಸುವಿಕೆ.

೫ **ವೈಹಾಳಿ**=ಕುದುರೆಯ ಏರಾಟ.

## ೧೪೩ನೆಯ ಹಾಡು

ಅನೇಕ ಉದಾಹರಣೆಗಳೊಂದಿಗೆ ಒಂದೊಂದಕ್ಕೂ ಒಂದೊಂದು ನೀತಿಯನ್ನು ಹೇಳುತ್ತ ದಾಸರು ಸಾಗಿದ್ದಾರೆ.

೧ **ಬಾತೆ**=ಬಾಳ್ವೆ=ಜೀವನ, ಸಂಸಾರ.

## ೧೪೪ನೆಯ ಹಾಡು

ಅನೇಕ ಲೋಕಾನುಭವದ ದೃಷ್ಟಾಂತಗಳೊಂದಿಗೆ ದಾಸರು ಮಾನವನಿಗೆ ನೀತಿಯನ್ನು ಉಪದೇಶಿಸಿದ್ದಾರೆ.

೧ **ಶೀಲದ ಕೆಲಸ**=ಶುಚಿಯಾದ ಕಾರ್ಯ.

೨ **ಕಾಸಾರ**=ಸರೋವರ. (ಪ್ರತಿಧ್ವನಿ ಮಾತ್ರವಾಗುತ್ತಿದೆ.)

೫ **ಓದನ**=ಅನ್ನ.

## ೧೪೫ನೆಯ ಹಾಡು

ಈ ಹಾಡಿನಲ್ಲಿ ದಾಸರು ಜೀವನದ ಆದರ್ಶದ ಕೆಲವು ಮಾತುಗಳನ್ನು ಉದಾಹರಣೆಗಳೊಂದಿಗೆ ಹೇಳಿದ್ದಾರೆ.

೧ **ನಿಜ**=ನಿಜಜ್ಞಾನ.

೩ **ದಳ**=ಸೈನ್ಯ.

## ೧೪೬ನೆಯ ಹಾಡು

ಜೀವನದ ಹೋರಾಟವು ವ್ಯರ್ಥವೆಂಬುದನ್ನು ಈ ಹಾಡಿನಲ್ಲಿ ಬೋಧಿಸಲಾಗಿದೆ.

೧ **ಅಂತರ**=ಒಳಗಿನ ಮನಸ್ಸು.

೫ **ಬಿಸಿಲಹಣ್ಣು**=ಬಿಸಿಲಿನ ತಾಪ.

## ೧೪೭ನೆಯ ಹಾಡು

ಇಂತಿಂತಹ ಮಾತುಗಳು ಬೇಡ—ಎಂಬುದನ್ನು ದಾಸರು ವಾಸ್ತವವಾದಿಗಳಾಗಿ ಇಲ್ಲಿ ವಿವರಿಸಿದ್ದಾರೆ.

೧ **ಏಳಲ**=ತಿರಸ್ಕಾರ.

೨ **ಜಡ**=ಮಂದಬುದ್ಧಿ.

೩ **ಹವಣು**=(ತ್ಸ–ಪ್ರಮಾಣ)=ಅಳತೆ, ಶಕ್ತಿ.

**ಜವನಭೂಮಿ**=ಯಮನ ಲೋಕ.

**ಜೋಕೆ**=ಸಂರಕ್ಷಣೆ.

## ೧೪೮ನೆಯ ಹಾಡು

ಈ ಹಾಡಿನಲ್ಲಿ ದಾಸರು ಸುಖವೆಲ್ಲಿದೆ ? ಕಷ್ಟವೆಲ್ಲಿದೆ ?—ಎಂಬುವನ್ನು ಹೇಳಿದ್ದಾರೆ.

೨ **ಬದ್ಧ**=ಮಿತವಾದ ಮಾತು.

೩ **ಭೂತೇಶ**=ಶಿವ.

೪ **ಆಧಾರ**=ಒತ್ತೆ.

## ೧೪೯ನೆಯ ಹಾಡು

ಕೆಟ್ಟು ನಂಟರ ಮನೆಯಲ್ಲಿ ಸೇರುವುದು ತುಂಬ ದುಃಖಕಾರಿ ಎಂಬುದನ್ನು ದಾಸರು ಈ ಹಾಡಿನಲ್ಲಿ ಪರಿಣಾಮಕಾರಿಯಾಗಿ ವಿವರಿಸಿದ್ದಾರೆ.

೧ **ಹರಿ**=ಸಿಂಹ.

**ಉರುವ**=ಶ್ರೇಷ್ಠ.

**ಗ್ರಾಸ**=ತುತ್ತು.

## ೧೫೦ನೆಯ ಹಾಡು

ಜೀವನದಲ್ಲಿ ಯಾವು-ಯಾವುದು ಅಂದಗೇಡಿಯೆಂಬುದನ್ನು ಈ ಹಾಡಿನಲ್ಲಿ ದಾಸರು ಅನೇಕ ಉದಾಹರಣೆಗಳೊಂದಿಗೆ ಹೇಳಿದ್ದಾರೆ.

೩ **ಬಲ್ಲಿದ**=ಬಲವಂತ.

## ೧೫೧ನೆಯ ಹಾಡು

ನೀಚಜನರ ಸಹವಾಸವು ವಿಷಕ್ಕಿಂತಲೂ ಕೆಟ್ಟುದೆಂಬುದನ್ನು ದಾಸರು ಈ ಸುಳಾದಿಯಲ್ಲಿ ವಿವಿಧರೀತಿಯಲ್ಲಿ ಹೇಳಿದ್ದಾರೆ.

೧ **ಅರಸು**=ಹುಡುಕು.

**ದಂಡೆಯು**=[illegible].

೨ **ವಿಭೂತಿ**=ಮಹತಿ.

೪ **ಪಾಷಂಡ**=ನಾಸ್ತಿಕ

**ಬಿಸಿಅರಿಸಿನವವ್ವ**=ಅರಿಸಿನಕ್ಕೆ ಹೆಚ್ಚು ಬಿಸಿತಾಗಿದರೆ ಅದರ ಬಣ್ಣ ಹೋಗುತ್ತದೆ.

೫ **ಕಮಲೇಂದು**=ಕಮಲಕ್ಕೂ ಚಂದ್ರನಿಗೂ ಆಗುವುದಿಲ್ಲ.

## ೧೫೨ನೆಯ ಹಾಡು

ನಿರರ್ಥಕವಸ್ತುಗಳು ಎಷ್ಟಿದ್ದರೂ ಪ್ರಯೋಜನವೇನು ?—ಎಂಬುದನ್ನು ದಾಸರು ಈ ಗೀತದಲ್ಲಿ ಅನೇಕ ಉಪಮೆಗಳೊಂದಿಗೆ ಹೇಳಿದ್ದಾರೆ.

೨ **ಸಂಚಿ**=ಮನೆಗಳಿರುವ ಚೀಲ.

## ೧೫೩ನೆಯ ಹಾಡು

ಅಜ್ಞಾನಿಗೆ ಯಾವಯಾವ ಉಪಾಯಗಳನ್ನು ಮಾಡಿದರೂ ಆತನ ಮೂಲ-ಗುಣವು ಹೋಗಲಾರದೆಂಬುದನ್ನು ಈ ಉಗಾಭೋಗದಲ್ಲಿ ದಾಸರು ಹೇಳಿ, ಜ್ಞಾನಿಯ ಶ್ರೇಷ್ಠತೆಯನ್ನು ಹೊಗಳಿದ್ದಾರೆ.

೧ **ತಾಮಸ**=ಅಜ್ಞಾನ.

## ೧೫೪ನೆಯ ಹಾಡು

ಬಲವಂತನನ್ನು ಎಲ್ಲರೂ ಓಲೈಸುವರು—ಎಂಬ ಸಾಮಾನ್ಯ ನೀತಿಯನ್ನು ದಾಸರು ನುಡಿ-ನುಡಿಗಳಲ್ಲಿಯೂ ಇಲ್ಲಿ ಚಮತ್ಕಾರವಾದ ಉಪಮೆಗಳನ್ನು ಕೊಟ್ಟು ಹೇಳಿದ್ದಾರೆ.

೧ **ಅರ್ಕ**=ಸೂರ್ಯ.

೨ ವನಾನಿ.ದಹತೋವಹ್ನೇಃ ಸಖಾಭವತಿ ಮಾರುತಃ ।
ಸಏವದೀಪನಾಶಾಯ ಸಖೇ ಕಸ್ಯಾಸ್ತಿ ಸೌಹೃದಂ ॥
(ಸುಭಾಷಿತ ರತ್ನಭಾಂಡಾಗಾರ)

## ೧೫೫ನೆಯ ಹಾಡು

ಹೊರವೇಷಗಳಿಂದ ಮಾನವನು ಸುಜನನೂ, ಗೌರವಶಾಲಿಯೂ. ಜ್ಞಾನಿಯೂ ಎನಿಸಿಕೊಳ್ಳಲಾರ.

೨ **ವನವಾಸಿ**=ವನದಲ್ಲಿರುವ ತಪಸ್ವಿ.

೪ **ಸಿಂಧುಜ**=ಹಾಲಾಹಲ, (ವಿಷ ಸಮುದ್ರದಲ್ಲಿ ಹುಟ್ಟಿತು).

**ಶೀತಕರ**=ಚಂದ್ರ, ಶೈತ್ಯಕಾರಕ.

## ೬ ಪರ್ಯಾಯನೀತಿ

ಜೀವನದ ನೀತಿಗಳನ್ನು ರೂಪಕಗಳ ರೀತಿಯಿಂದ ಹೇಳಿದ ಹಾಡುಗಳು ಈ ಭಾಗದಲ್ಲಿವೆ.

### ೧೫೬ನೆಯ ಹಾಡು

೧ **ಒಗೆತನ**=ಸಂಸಾರ.

**ಆರುಮಂದಿ ಗಂಡರು**=ಷಡ್ರಿಪುಗಳು. ಕಾಮ ಮುಂ.

**ಮೂರು ಸುತರು**=ತ್ರಿವಿಧ ತಾಪಗಳು.

(೧ ಆಧಿಭೌತಿಕ, ೩ ಆಧ್ಯಾತ್ಮಿಕ, ೨ ಆಧಿದೈವಿಕ.)

**ಆರುಮೂರು**=ಒಂಬತ್ತು ದ್ವಾರಗಳು.

**ಏಳ್ವರು**=ಸಪ್ತವ್ಯಸನಗಳು.

೨ **ಹತ್ತುಮಂದಿ**=ದಶೇಂದ್ರಿಯಗಳು.

**ಅತ್ತಿಗೆ**=ಬುದ್ಧಿ.

**ನಗೆಹೆಣ್ಣು**=ಅಹಂಕಾರ.

೩ **ಪಂಚರು ಐವರು**=ಪಂಚೇಂದ್ರಿಯಗಳು.

**ತೊಂಚಹಂಚ**=ಪ್ರ-(ಪ್ರಪಂಚ ಅಹಂಚ) ನಾನು ನೀನು ಎಂದು.

**ವಂಚನೆ........**ಬರೆದಿಹನಮ್ಮ ಬ್ರಹ್ಮನು ಮೋಸಪಡಿಸಿದ ಜಗತ್ತನ್ನು ಇಲ್ಲದಂತೆ ಮಾಡುವಂತೆ, ನನ್ನ ಹಣೆಯಲ್ಲಿ ಎಲ್ಲವನ್ನು ಅಸ್ಥಿರವನ್ನಾಗಿ ಬರೆದಿದ್ದಾನೆ.

೪ ಅತ್ತೆ=[illegible]

೫ **ಒಂಬತ್ತು ಬಾಗಿಲ**=ದೇಹ.

**ಕುಂಭಕನರಕ**= ಕುಂಭಕನರಕದಂತಿರುವ ಈ ದೇಹ. ಇದನ್ನು ನಾನು ಜೋಕೆಮಾಡುತ್ತಿರುತ್ತೇನೆ.

**ಕಾವರ ದಾಳಿ**=ತತ್ತ್ವಾಭಿಮಾನಿ ದೇವತೆಗಳ ದಾಳಿ.

**ಇಂಬಿನೊಳ್**=ಹೃದಯದಲ್ಲಿ.

## ೧೫೭ನೆಯ ಹಾಡು

ಇದು ಮತ್ತೊಂದು ಪರ್ಯಾಯಗೀತ. ಹರಿಭಕ್ತಿಯು ಒಳಗೆ ಸ್ಥಳ ಕೇಳಿದಂತೆಯೂ ತನ್ನೊಳಗೆ ಸ್ಥಳವೇ ಇಲ್ಲವೆಂದು ಜೀವ ಹೇಳಿದಂತೆಯೂ ಇದರಲ್ಲಿ ರೂಪಕವಿದೆ.

೧ **ಸಂದಣಿ**=ಗುಂಪು.

**ಐದೊಕ್ಕಲು**=ಪಂಚಜ್ಞಾನೇಂದ್ರಿಯ.

**ಐದುಮುಂದಿ ಬೇರೆ**=ಪಂಚಕರ್ಮೇಂದ್ರಿಯ.

**ಐದುನಾಲ್ಕು**=ನವದ್ವಾರ.

೨ **ಆರುಮಂದಿ ಕಳ್ಳರು**=ಷಡ್ರಿಪುಗಳು.

**ಪ್ರೇರಕರು**=ಮನಸ್ಸು, ಅಹಂಕಾರ, ಬುದ್ಧಿ.

**ಕರ್ತೃ**=ಜೀವ.

೩ **ಅತ್ತೆ**=ಮಾಯೆ.

**ಪುರುಷ**=ಗಂಡ, ವಿವೇಕ.

**ಮಾವನು**=ವಿಚಾರ.

**ಮೈದುನ**=ಅಜ್ಞಾನ.

**ಸರಿಹೊತ್ತು**=ಸರಿರಾತ್ರಿ.

೪ **ನಗೆಹೆಣ್ಣು**=ಅಹಂಕಾರ.

ಮಲಮಗಳು=ಆಶೆ.

ಅತ್ತಿಗೆ=ಬುದ್ಧಿ.

## ೧೫೮ನೆಯ ಹಾಡು

ಮಾನವನಿಗೆ ಅವಶ್ಯವಾದ ದಾನಗುಣವು, ಯಾವಯಾವ ರೀತಿಯಲ್ಲಿ ಬಾಳಿನಲ್ಲಿ ಹೀನಾಯಗೊಂಡಿದೆ ಎಂಬುದನ್ನು ಈ ಹಾಡಿನಲ್ಲಿ ನೋಡಬಹುದು.

೨ ಕಟ್ಟುಗ್ರ=ಮೊಂಡತನ.

ವೀಸ=ಚಿಕ್ಕನಾಣ್ಯ.

ದವಸ=ಧಾನ್ಯ.

## ೧೫೯ನೆಯ ಹಾಡು

ದೇಹವನ್ನು ಬಿಟ್ಟುಹೋಗುವ ಪ್ರಾಣಕ್ಕೂ, ದೇಹಕ್ಕೂ ನಡೆದ ಸಂವಾದವಿದೊಂದು.

೧ ಹಂಸ=ಜೀವಾತ್ಮ.

ಜಾಳಂಧ್ರ=ಜಾಳಿಗೆಯನ್ನು ಹಚ್ಚಿದ ಕಿಡಕಿ.

ರೂಹಾರ=(ತ್ಸ-ರೂಪಕಾರ) ಶಿಲ್ಪದ ಆಕೃತಿ.

೨ ದೇಹವನ್ನು ಬಳ್ಳಿಗೂ, ಜೀವವನ್ನು ಹಣ್ಣಿಗೂ ಹೋಲಿಸಿ ಹೇಳಲಾಗಿದೆ.

೩ ಜೀವವನ್ನು ನೊಣಕ್ಕೂ, ದೇಹವನ್ನು ಜೇನುಗೂಡಿಗೂ ಹೋಲಿಸಿ ಹೇಳಿದ್ದಾರೆ.

ಹಿಪ್ಪೆ=ರಸವಿಲ್ಲದಂತಹ ಜೇನುಹುಟ್ಟು.

೪ ದೇಹವನ್ನು ಹಣತೆಗೂ, ಜೀವವನ್ನು ಜ್ಯೋತಿಗೂ ಹೋಲಿಸಿ ಹೇಳಿದ್ದಾರೆ.

ಪಸಬಿಗ್ತ್ರರದ=[illegible] ಬಗೆಯನ್ನು ಬಲ್ಲವ.

ರಸವಸ್ತು=ಎಣ್ಣೆ.

೫ ಬರೆದ ಬರೆಹ=ಹಣೆಬರೆಹ.

ಆಣಿಯಮುತ್ತು=ಜೀವ:

ಚಿಪ್ಪು=ದೇಹ.

## ೧೬೦ನೆಯ ಹಾಡು

ಮಂಗಳ.

೩ ಧುರ=ಕಾಳಗ.

---

ಈ ಅರ್ಥ-ಟಿಪ್ಪಣಿಗಳಿಂದ ಕೂಡಿದ
ಭಾಗವು ಪರಿಶಿಷ್ಟ ೧
(ಶಿರೋಭಾಗದಲ್ಲಿ ಮರೆತುಹೋಗಿದೆ.)

# ಪರಿಶಿಷ್ಟ ೨

## ಹಾಡುಗಳ ಅಕಾರಾದಿ


| | | |
|---|---|---|
| ೧ | ಅಂಜಬೇಡ ಬೇಡೆಲೆ ಜೀವ-ಭವ | ೧೯ |
| ೨ | ಅಜ್ಞಾನಿಗಳ ಕೂಡ ಅಖಿಳಸ್ನೇಹಗಳಿಂದ | ೮೭ |
| ೩ | ಅಂದವಿಲ್ಲದ ಅಶಕ್ತನಿಗೆ ಒಂದೇ ಅರಿವೆಯಿಂದ (ಉ) | ೩೩ |
| ೪ | ಅನ್ನಪಾನಾದಿಗಳೀಯೊ ಅಭ್ಯಾಗತ ಬ್ರಾಹ್ಮಣರಿಗೆ (ಉ) | ೩೮ |
| ೫ | ಅನಾಮಿಕಾಮಧ್ಯದ ಎರಡನೆಯ ಗೆರೆ ಆದಿ (ಉ) | ೩೬ |
| ೬ | ಅನುಕೂಲವಿಲ್ಲದ ಸತಿಯು ವರ್ಜಿಸಬೇಕು (ಉ) | ೯೪ |
| ೭ | ಅನುದಿನದಲಿ ಬಂದು ತನುವೆಲ್ಲ ಸೂರೆಗೊಂಡು | ೧೭ |
| ೮ | ಅಪರಾಧ ಹತ್ತಕೆ ಅಭಿಷೇಕ ಉದಕ (ಉ) | ೩೬ |
| ೯ | ಅರಿಯದಧಮನ ಸಂಗ ಕರಗಿದ್ದ ಹಿತ್ತಾಳಿ | ೮೬ |
| ೧೦ | ಅಲ್ಲದ ಕರ್ಮವ ಆಚರಿಸಿದವ ಕೆಟ್ಟ (ಉ) | ೯೩ |
| ೧೧ | ಆಕಳ ಕಿವಿಗೆ ಎಣೆ ಅಂಗೈ ಹಳ್ಳವಾಗಿರಬೇಕು (ಉ) | ೩೪ |
| ೧೨ | ಆಚಾರವಿಲ್ಲದ ನಾಲಗೆ—ನಿನ್ನ— | ೪೭ |
| ೧೩ | ಆಜ್ಞೆಯಿಂದಾಳಬೇಕಣ್ಣ—ಗಂಡ— | ೮೧ |
| ೧೪ | ಆಪೋಶನ ಅಭ್ಯಂಜನ ಆಚಮನ ಮಾಡಲು (ಉ) | ೩೫ |
| ೧೫ | ಆಯುಸ್ಸು ಇದ್ದರೆ ಅನ್ನಕ್ಕೆ ಕೊರತೆಯಿಲ್ಲ (ಉ) | ೪೨ |
| ೧೬ | ಆರ ಹಾರೈಸಿದರೇನುಂಟು—ಬರಿ— | ೧೧೮ |
| ೧೭ | ಆರು ಹಿತವರು ಮನವೆ ಮೂರುಮಂದಿಗಳೊಳಗೆ | ೭೫ |
| ೧೮ | ಆವ ಕುಲವಾದರೇನು | ೫೭ |
| ೧೯ | ಇಕ್ಕಲಾರೆ ಕೈಯೆಂಜಲು—ಚಿಕ್ಕ— | ೧೩೦ |
| ೨೦ | ಇಂತು ಶ್ರುತಿ-ಸ್ಮೃತಿ ಸಾರುತಿದೆಕೇಳು | ೯೬ |

೨೧ ಇರಬೇಕು ಹರಿದಾಸರ ಸಂಗ ೫೦
೨೨ ಇರಲೇ ಬಾರದು ಇಂಥಲ್ಲಿ ೧೦೨
೨೩ ಎಚ್ಚರದಲಿ ನಡೆ ಮನವೆ—ನಡೆಮನವೆ—ಮುದ್ದು ೬೫
೨೪ ಎಚ್ಚರಿಕೆ ಎಚ್ಚರಿಕೆ ಮನವೆ—ನಮ್ಮ— ೬೭
೨೫ ಎಂತಹುದೊ ನಿನ್ನ ಭಕುತಿ ೧೫
೨೬ ಎಡದಕೈಯಿಂದ ನೀರ ಎತ್ತಿ ಬಲದ ಕೈಯಲ್ಲಿಟ್ಟು (ಉ) ೩೯
೨೭ ಎದೆಯ ನಾಡಿನಲೊಂದು ಸೋಜಿಗಹುಟ್ಟಿ (ಉ) ೪೦
೨೮ ಎರಡು ಗಳಿಗೆ ಬೆಳಗು ಇರಲು ಗೃಹಸ್ಥನಿಗೆ ಸ್ನಾನ (ಉ) ೩೩
೨೯ ಎಲ್ಲವನು ಬಲ್ಲೆನೆನ್ನುವಿರಲ್ಲ ೯೨
೩೦ ಏಕೆ ಮೂರ್ಖನಾದೆ—ಮನುಜಾ ೯೧
೩೧ ಏನು ಇಲ್ಲದ ಎರಡುದಿನದ ಸಂಸಾರ ೫೩
೩೨ ಏನೇನ ಮಾಡಿದರೇನು ಫಲವಯ್ಯ ೧೦೫
೩೩ ಏಳಲವ ಮಾಡಿದಲ್ಲಿ ಏನಕೊಟ್ಟರೂ ಬೇಡ ೧೧೯
೩೪ ಒಂದಕ್ಷರವ ಪೇಳಿದವರ (ಉ) ೩೭
೩೫ ಕಂಡ ಸೂರ್ಯಗೆ ಸಂಧ್ಯೆ ಕಾಣದ ಸೂರ್ಯಗೆ ಸಂಧ್ಯೆ ಭೂ. (ಉ) ೩೪
೩೬ ಕಡುಕೃಪೆಯಿಂದ ಹರಿ ಒಲಿದರೆ ಸತ್ಯದ ೧೦೧
೩೭ ಕಣ್ಣೆತ್ತಿ ನೋಡಲುಬೇಡ—ಅವಳ— ೭೯
೩೮ ಕಲಿಕಾಲಕೆ ಸಮಯುಗವು ಇಲ್ಲವಿಲ್ಲವಯ್ಯ (ಉ) ೨೯
೩೯ ಕಷ್ಟವಾವುದಯ್ಯ ಸುಖವಾವುದಯ್ಯ ೧೨೦
೪೦ ಕೀರ್ತಿ ಕಿಂಕರಗೆ ಅಪಕೀರ್ತಿ ಮಂಕುಗಳಿಗೆ (ಉ) ೯೩
೪೧ ಕುಟುಂಬಭರಣ ಎರಡಷ್ಟು ಬ್ರಾಹ್ಮಣರಿಗೆ (ಉ) ೪೧
೪೨ ಕುಡಿಯಕೊಟ್ಟ ಅಮೃತದಂಥ ನೊರೆಹಾಲನೊಲ್ಲದೆ (ಉ) ೯೩
೪೩ ಕುಂದದ ದೀಪವ ನಂದಿಪಗೆ (ಉ) ೩೯
೪೪ ಕೂಪದಲ್ಲಿಯಾದರೂ ಕೊಳದಲ್ಲಿಯಾದರೂ (ಉ) ೩೨
೪೫ ಕೆಟ್ಟಿತು ಕೆಲಸವೆಲ್ಲ—ಲೋಕದಿ—ಕಾಮ.... ೧೦೭
೪೬ ಕೆಟ್ಟು ನಂಟರ ಸೇರುವುದು ಬಹಳ ಕಷ್ಟ ೧೨೧

೪೭ ಕೆಟ್ಟಿನಲ್ಲೊ ಹರಿಯೆ ೧೪
೪೮ ಕೊಬ್ಬಿನಲಿರಬೇಡವೊ ಏ ನಮ್ಮ ಮನುಜಾ ೯೪
೪೯ ಖಳರ ನೋಟವೆ ಹಾವಲ್ಲದೆ ಹಾವ ಬೇರೆ
ಇನ್ನರಸಲೇತಕೆ (ಸು) ೧೨೨
೫೦ ಗಂಡ ಬಿಟ್ಟ ಗೈಯಾಳಿ ಕಾಣಣ್ಣ—ಅವಳು ೮೦
೫೧ ಗಂಡ ಮಾಡಿದ ಪಾಪ ಹೆಂಡತಿಗಿಲ್ಲ (ಉ) ೭೮
೫೨ ಘಾತಕರಿಗಿನ್ನೇಕೆ ಪರಮಾರ್ಥಶ್ರವಣ ೧೨೨
೫೩ ಚಿತ್ತಶುದ್ಧಿಯಿಲ್ಲದವನವ ಜ್ಞಾನಿಯೆ—ಪುಣ್ಯ ೧೨೬
೫೪ ಚೋರನಾದರೂ ಚಂಡಾಲನಾದರೂ (ಉ) ೩೮
೫೫ ಛೀ ಛೀ ಛೀ ಛೀ ಕಂಡೆಯ ಮನವೆ—ಇಂಥ ೬೮
೫೬ ಜಾಲಿಯ ಮರವಂತೆ—ದುರ್ಜನರೆಲ್ಲ ೮೮
೫೭ ಜ್ಞಾನವೊಂದೆ ಸಾಕು ಮುಕ್ತಿಗೆ—ಇ— ೨೮
೫೮ ತನಗಲ್ಲದ ವಸ್ತು ಎಲ್ಲಿದ್ದರೇನು ೧೨೪
೫೯ ತನುವ ನಂಬಲುಬೇಡ ಜೀವವೆ ೧೪
೬೦ ತನುವ ನೀರೊಳಗದ್ದಿ ಫಲವೇನು ? ೬೨
೬೧ ತನುವಿನೊಳಗೆ ಅನುದಿನವಿದ್ದು ೧೩೧
೬೨ ತಾಸು ಬಾರಿಸುತಿದೆ ಕೇಳಿ—ಹರಿದಾಸರೆಲ್ಲ— ೧
೬೩ ತಾಳಿಯ ಹರಿದು ಬೀಸಾಟಿ—ನೀ— ೯೮
೬೪ ತುದಿನಾಲಗೆ ಬೆಲ್ಲ ಎದೆಗತ್ತರಿಯುವರ ಸಂಗಬೇಡ ೧೦೫
೬೫ ದಾಸನೆಂತಾಗುವೆನು ಧರೆಯೊಳಗೆ ನಾನು ೧೩
೬೬ ಧನವ ಗಳಿಸಬೇಕಿಂತಹದು—ಈ— ೭೭
೬೭ ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ ೨೭
೬೮ ಧರ್ಮವೇ ಜಯವೆಂಬ ದಿವ್ಯಮಂತ್ರ ೨೭
೬೯ ಧ್ವಜವಜ್ರಾಂಕುಶ ರೇಖಾಂಕಿತ ಹರಿಪಾದಾಂ—(ಉ) ೩೬
೭೦ ನಕ್ಷತ್ರಗಳ ಕಂಡ ಸರಸಿಗೆ ಉತ್ತಮ ಸಂಧ್ಯೆ (ಉ) ೩೩
೭೧ ನಗೆಯಬರುತಿದೆ—ಎನಗೆ ೧೦೬
೭೨ ನಂಬಬೇಡ ನಾರಿಯರನು ೮೨

೭೩ ನಾರಾಯಣ ಎನ್ನಬಾರದೆ ನಿಮ್ಮ— ೨
೭೪ ನಾರಾಯಣನೆಂಬ ನಾಮವ ನೇಮದಿ ನೆನೆಯುತಿರೆಚ್ಚರಿಕೆ ೨
೭೫ ನಿಂದಕರಿರಬೇಕಿರಬೇಕು ೧೦೪
೭೬ ನಿಂದೆಯಾಡಲುಬೇಡ ನೀಚಾತ್ಮಾ ೯೫
೭೭ ನೀಚ ಮಾನವರಿಗೆ ಸಿರಿಬಂದರೇನು? ೧೦೮
೭೮ ನೀರಡಿಸಿ ಜಾಹ್ನವಿಯ ತೀರದಲಿ ಬಂದು (ಉ) ೭
೭೯ ನೀರಮೇಲಣ ಗುಳ್ಳೆಯಂತೆ ಈ ದೇಹ (ಉ) ೨೬
೮೦ ನೀಲವಸ್ತ್ರವಾಗದು ನಾರಿಯರ ಶಾಲೆಯಾಗದು (ಉ) ೩೩
೮೧ ನುಡಿವೆ ಲಿಂಗಶೌಚಕ್ಕೊವ್ಮೆ ಗುದಕ್ಕೆ ಮೂರು (ಉ) ೩೧
೮೨ ನೆಚ್ಚದಿರು ಪ್ರಾಣಿ ಸಂಸಾರ ಸ್ಥಿರವೆಂದು ೯೬
೮೩ ನೆಚ್ಚದಿರೀ ಭಾಗ್ಯ ಆರಿಗೂ ಸ್ಥಿರವಲ್ಲ ೭೦
೮೪ ನೆಚ್ಚಬೇಡ ಈ ಭಾಗ್ಯವನು ಹುಚ್ಚುಗೊಂಡ ಮನುಜಾ ೭೨
೮೫ ಪತಿಭಕುತಿಯಿಲ್ಲದಿಹ ಸತಿಯ ಸಂಗ— ೮೩
೮೬ ಪರರನ್ನ ಉಂಡ ಬ್ರಾಹ್ಮಣರಿಗೆ (ಉ) ೩೯
೮೭ ಪರಾನ್ನವೇತಕೆ ಬಂತಯ್ಯ ಎನಗೆ ಇಂದು ೪೯
೮೮ ಪಾಪಿಗೇತಕೆ ಪರಮತತ್ತ್ವಬೋಧ ೧೧೦
೮೯ ಪಾಪಿ ಬಲ್ಲನೆ ಪರರ ಸುಖ-ದುಃಖದಿಂಗಿತವ ೧೧೦
೯೦ ಪ್ರಾತಃಕಾಲದ ನಿದ್ರೆ ಪರಿಹರಿಸಿ ಹರಿಯನ್ನು ಸ್ಮರಿಸಿ (ಉ) ೩೦
೯೧ ಬಲ್ಲಿದ ನೀನೆಂದು ಬಡವರ ಬಾಯನು ಬಡಿಯದಿರೆಚ್ಚರಿಕೆ ೯೭
೯೨ ಬಾತೆಗೆ ಬಾರದ ವಸ್ತು ಬಹಳಿದ್ದರೇನು ೧೧೪
೯೩ ಬಿಡು ಮನುಜಾ ಈ ಜಪವು ಸಿದ್ಧಿಗೆ ಬಾರದು (ಉ) ೩೫
೯೪ ಬುತ್ತಿಯ ಕಟ್ಟೊ ಮನಜಾ ೨೫
೯೫ ಬೆಲ್ಲದ ಕಟ್ಟೆಯ ಕಟ್ಟಿ ಬೇವಿನ ಬೀಜವ ಬಿತ್ತಿ (ಉ) ೧೨೫
೯೬ ಬೇವ ಬೆಲ್ಲದೊಳಿಡಲೇನು ಫಲ? ೧೧೨
೯೭ ಮಡಿ ಮಡಿ ಮಡಿಯೆಂದು ಮುಮ್ಮಾರು ೪೨
೯೮ ಮಡಿ ಮಡಿ ಮಡಿಯೆಂದು ಅಡಿಗಡಿಗೆ ಹಾರುವೆ ೪೨

೯೯ ಮಧ್ಯಾಂಗುಲಿಯ ಮೇಲೆ ಮಣಿಸರವಿಟ್ಟು (ಉ) ೩೬

೧೦೦ ಮನುಜಶರೀರವಿದೇನು ಸುಖ ೫೨

೧೦೧ ಮನೆಯಲ್ಲಿ ವಿಪ್ರಪಾದೋದಕದ ಹೆಸರಿಲ್ಲದಿದ್ದರೆ (ಉ) ೪೦

೧೦೨ ಮರೆಯಬೇಡ ಮನವೆ ನೀನು ಹರಿಯ ಸ್ಮರಣೆಯ ೩

೧೦೩ ಮಲ-ಮೂತ್ರ ಮಾಡುವಾಗ ಕರದಲ್ಲಿ ಜಲವಿರೆ (ಉ) ೩೧

೧೦೪ ಮಲವು ತೊಳೆಯಬಲ್ಲುದೆ? ೬೧

೧೦೫ ಮಾನಭಂಗವ ಮಾಡಿ ಮೇಲುಪಚಾರವ ೧೦೩

೧೦೬ ಮಾನವರು ಕೃತಯುಗದಿ ಮಾಡಬೇಕು ತಪವನು ( ಉ ) ೪೧

೧೦೭ ಮಾನಹೀನರಿಗಭಿಮಾನವೇಕೆ ಪ್ರ— ೫೬

೧೦೮ ಮೂರ್ಖರಾದರು ಇವರು ಲೋಕದೊಳಗೆ ೮೯

೧೦೯ ಮೂಢ ಬಲ್ಲನೆ ಜ್ಞಾನ ದೃಢಭಕುತಿಯ ೧೧೧

೧೧೦ ಮೆರೆಯದಿರೆಲೆ ಮನವಿಲ್ಲಿ—ಯಮ— ೬೯

೧೧೧ ರಮ್ಮೆರಮಣ ತಾನು ಬೊಮ್ಮಾದಿಗಳಿಗೆಲ್ಲ (ಉ) ೩೩

೧೧೨ ರಾಮಗೋವಿಂದ ಸೀತಾರಾಮಗೋವಿಂದ ೧೧೭

೧೧೩ ರಾಮರಾಮ ರಾಮರಾಮ ಸೀತಾರಾಮ ಎನ್ನಿರೊ ೫

೧೧೪ ರೊಕ್ಕವೆರಡಕ್ಕೆ ದುಃಖ ೭೩

೧೧೫ ಲಂಗೋಟಿ ಬಲು ಒಳ್ಳೆಯದಣ್ಣ ಒಬ್ಬರ ೭೬

೧೧೬ ಲೊಳಲೊಟ್ಟೆ—ಬದುಕು—ಲೊಳಲೊಟ್ಟೆ ೫೪

೧೧೭ ವಂದಿಸಿದವರೆ ಧನ್ಯರು—ನಮ್ಮ— ೧೨

೧೧೮ ವರಕವಿಯಿದ್ದಲ್ಲಿ ನರಕವಿಗಳ ಕೊಂಡಾಡಬಾರದು ಇಂಥ ೯೮

೧೧೯ ವರುಷ ಕಾರಣವಲ್ಲ ಹರಿಭಜನೆಗೆ ೧೧

೧೨೦ ವಾರಿಜನಾಭನ ಕರುಣವೇ ಸ್ಥಿರ ಸಂಸಾರವು ಎರವು ಕೇಳಾತ್ಮಾ ೨೩

೧೨೧ ವಿಷಯದ ವಿಚಾರ ಬಿಡು ವಿಹಿತಕರ್ಮವ ಮಾಡು ೨೪

೧೨೨ ಶಕ್ತನಾದರೆ ನಂಟರೆಲ್ಲ ಹಿತರು—ಅ— ೧೨೫

೧೨೩ ಶತ್ರುವಾಗಲಿ ಚೋರಚಂಡಾಲನಾಗಲಿ (ಉ) ೩೮

೧೨೪ ಸಂಗವೇತಕೆ ಅಲ್ಪರೊಡನೆ ಗುಣವಿಲ್ಲ ೮೬

೧೨೫ ಸತ್ಯವೇ ಸ್ನಾನ ಜಪನೇಮ-ಹೋಮ-—ಅ— ೪೮

೧೨೬ ಸತಿಗೆ ಸ್ವಾತಂತ್ರ್ಯವ ಕೊಡದಿರಿ—ನೀವು— ೮೪

೧೨೭ ಸಹಸ್ರಕಾಷ್ಠದ ಭಾರ ಸದ್ಯೋಘೃತ ಕುಂಭ ಮೂರು (ಉ) ೩೭

೧೨೮ ಸ್ಥಳವಿಲ್ಲವೈ ಭಾಗವತರೇ—ಈಗ— ೧೯

೧೨೯ ಸಾಕುಸಾಕು ಸಂಸಾರ ಸಜ್ಜಾಗಿಲ್ಲ ಒಲ್ಲೆ ಒಗತನವ ೧೨೭

೧೩೦ ಸಾರಿಗೆಯ ಮಾಡೋಣ ಸಜ್ಜನರು ಬನ್ನಿರೊ ೭

೧೩೧ ಸುಖಕೆ ತಾನಾರೊ ದುಃಖಕೆ ತಾನಾರೊ (ಉ) ೧೦

೧೩೨ ಸುಖವಾದಡೆ ಎನ್ನಿಂದಾಯಿತೆಂಬರು (ಉ) ೧೦೨

೧೩೩ ಸುಮ್ಮನೆ ಬಾಹೊದೆ ಮುಕುತಿ—ನಮ್ಮ— ೧೮

೧೩೪ ಸುಮ್ಮನೆ ವೈಷ್ಣವನೆಂದಿರಿ—ಪರ ೪೫

೧೩೫ ಹಂಚಿನ ಇದಿರಲಿ ಹಲ್ಲನು ತೆಗೆಯಲು ೧೧೫

೧೩೬ ಹಂಚು ಬಲ್ಲುದೆ ಹಲ್ಲ ತೆಗೆದರುಪಕಾರವನು ೧೧೩

೧೩೭ ಹತ್ತು ಗೋದಾನಸಮವು ಹರವಾಹನ ವೃಷೋತ್ಸರ್ಜನ (ಉ) ೪೦

೧೩೮ ಹತ್ತೈದು ಗಳಿಗೆಯ ಮೇಲೆ ಮತ್ತೈದು ಬರಲೆದ್ದು (ಉ) ೩೦

೧೩೯ ಹಮ್ಮನಾಡಲಿಬೇಡ ಹಮ್ಮು ಈಡೇರದು ೫೫

೧೪೦ ಹರಿಕಥಾಮೃತ ಸವಿಯ ಹರಿದಾಸರಲ್ಲದೆ ೯

೧೪೧ ಹರಿಕಥಾಶ್ರವಣ ಮಾಡೊ—ನಿರಂತರ— ೬

೧೪೨ ಹರಿಕೊಟ್ಟ ಕಾಲಕ್ಕೆ ಉಣಲಿಲ್ಲ ೨೧

೧೪೩ ಹರಿದಾಡುವಂತಹ ಮನಸ ನಿಲಿಸುವುದು ಕಷ್ಟ ೬೩

೧೪೪ ಹರಿಪದಯುಗಲವ ನಿತ್ಯ ನೆನೆದವಗೆ ೨೦

೧೪೫ ಹರಿಭಕುತಿ ಸುಖವು ಅನುಭವಿಗಲ್ಲದೆ ಮಿಕ್ಕ— ೧೦

೧೪೬ ಹರಿಯ ನೆನೆಯದ ನರಜನ್ಮವೇಕೆ— ೮

೧೪೭ ಹರಿಯ ನೆನೆಯಿರೊ—ನಮ್ಮ— ೪

| | | |
|---|---|---|
| ೧೪೮ | ಹರಿಯೆನ್ನು ಹರಿಯೆನ್ನು ಹರಿಯೆನ್ನು ಪ್ರಾಣಿ | ೫ |
| ೧೪೯ | ಹರೇಗೋವಿಂದಾ ಎಂದೇಳು ಹತ್ತವತಾರವ ಪೇಳು (ಉ) | ೩೦ |
| ೧೫೦ | ಹಲವು ಕರ್ಮಗಳಿಗೆ ಮಾಡು ಎರಡು ಆಚಮನ (ಉ) | ೩೪ |
| ೧೫೧ | ಹಲ್ಲು ಬೆಳಗುವಲ್ಲಿ ಜಂಬು-ಪ್ಲಕ್ಷ ಪತ್ರೆ (ಉ) | ೩೧ |
| ೧೫೨ | ಹಸಿವಾಯಿತೇಳು ದೇವರ ತೊಳೆಯೆಂಬರು (ಉ) | ೪೭ |
| ೧೫೩ | ಹಿಗ್ಗುವೆಯೇಕೊ ಏ ಮನುಜಾ | ೫೩ |
| ೧೫೪ | ಹಿರಿಯರ ದಿನದಲ್ಲಿ ಹೆಸರತೊವ್ವೆ ಅತ್ತೈಲಭಕ್ಷ್ಯ (ಉ) | ೪೧ |
| ೧೫೫ | ಹುಚ್ಚುಕುನ್ನಿ ಮನವೆ | ೬೩ |
| ೧೫೬ | ಹೃದಯದ ಮಲವನ್ನು ತೊಳೆಯಲರಿಯದೆ ತಾವು (ಉ) | ೩೨ |
| ೧೫೭ | ಹೆಣ್ಣನಿಚ್ಛಿಸುವರೆ ಮೂಢ—ಇದನು— | ೭೮ |
| ೧೫೮ | ಹೊಲೆಯ ಹೊರಗಹನೆ ಊರೊಳಗಿಲ್ಲವೆ ? | ೫೯ |
| ೧೫೯ | ಹೊಲೆಯ-ಹೊಲತಿ ಇವರವರಲ್ಲ | ೫೮ |
| ೧೬೦ | ಮಂಗಳಂ ಮಾರಮಣಗೆ ಮಂಗಳಂ | ೧೩೨ |

# ಪರಿಶಿಷ್ಟ ೩

## ಪ್ರಮುಖಪದಸೂಚಿ


ಅರ್ಕ ೧೨೬.
ಅಚ್ಯುತ ೪೪, ೬೩, ೬೫, ೬೭, ೬೮.
ಅಜ ೨೬, ೫೯, ೧೧೨.
ಅಜಾಮಿಳ ೧೨.
ಅಂಧಂತಮಸು ೯೩.
ಅನಂತ ೪೪.
ಅಂಬುಜಾಕ್ಷ ೨೫.
ಅಮಾವಾಸ್ಯೆ ೩೧.
ಅವಧೂತ ೧೦೬.
ಅವೈಷ್ಣವರು ೧೦೩.
ಅಷ್ಟಾಂಗ (ವಂದನೆ) ೧೨.
ಅಸುರ ೧೨೪.
ಆಗಮ ೯೨.
ಆಂಜನೇಯ ೭೬.
ಆದಿಕೇಶವ ೧೮.
ಆದಿತ್ಯ ೩೦.
ಆದಿಮೂರುತಿ ೧೨೧.
ಆನಂದತೀರ್ಥ ೯೭.
ಇಂದ್ರ ೧೦, ೩೩, ೫೧.
ಇಂದಿರಾಪತಿ ೧೨.
ಇಂದಿರೇಶ ೧೩, ೪೬, ೧೧೯.
ಇಂದು ೧೨೪.
ಇಪ್ಪತ್ತೊಂದು ಕುಲ ೯೦.
ಈಶ ೧.
ಉಡಚಮ್ಮ ೯೯.
ಎಕಲಾತಿ ೯೯.
ಎಲ್ಲಮ್ಮ ೯೯.
ಏಕಾದಶಿ ೩೧.
ಕರ್ಣ ೭೩.
ಕಂತುಜನಕ ೯೭.
ಕಂತುಪಿತ ೪೬.
ಕಂದರ್ಪ ೪೬.
ಕಲಿಕಾಲ ೨೯.
ಕಾಲ ೭೫.
ಕಾಲನವರು ೯೮.
ಕಾವೇರಿ ೪೩.
ಕಾಶಿ ೬೧, ೬೨, ೬೩, ೯೦.
ಕಾಸುವೀಸ ೬೧.
ಕೀಚಕ ೭೯.
ಕುಂಡಲಿಶಯನ ೪೧.
ಕುಂಭಕ ೧೨೮.
ಕುಂಭೀಪಾಕ ೫೯.

ಕುರುಪತಿ ೫೫.
ಕೃಚ್ಛ್ರ ೩, ೨೦.
ಕೃತಯುಗ ೪೧.
ಕೃಷ್ಣ ೧೨, ೨೬, ೪೬, ೫೫, ೫೬, ೯೦, ೧೦೪, ೧೨೬, ೧೨೭.
ಕೈವಲ್ಯ ೨೯, ೫೭.
ಖಗಪತಿ ೫೬.
ಗಂಗೆ ೩, ೨೫, ೪೬.
ಗಜೇಂದ್ರ ೨೬.
ಗರುಡ ೫೬.
ಗರುಡಕೇತನ ೧೮
ಖಂಡೆರಾಯ ೯೯.
ಗಾನ ೪೨.
ಗಾನಲೋಲ ೧೦೬.
ಗಾಯತ್ರಿ ೩೬.
ಗಿರಿಜಾಪುರ ೧೩೨.
ಗುಣನಿಧಿ ೫೫.
ಗುರುಮಂತ್ರ ೮೩.
ಗೋವಿಂದ ೧೯, ೩೦, ೧೧೭.
ಚಂದ್ರ ೧೧೬.
ಚಿತ್ತಜನಯ್ಯ ೩೦, ೧೦೬.
ಚೆನ್ನಿಗರಾಯ ೭.
ಜನಕ ೫೫.
ಜಲಜಲೋಚನ ೨೯.
ಜವ ೧೧೯.
ಜಾಗರ ೨, ೨೮.
ಜಾನಕಿರಮಣ ೨.
ಜಾಹ್ನವಿ ೨. ..
ತಾಸು ೧.
ತ್ರಿಜಗವಂದ್ಯ
ತುಳಸಿ ೬೯.
ತ್ರೇತಾಯುಗ ೪೧.
ದಯಾನಿಧಿ ೧೦೪.
ದಶಮಿ ೪೪.
ದಶಶಿರ ೭೯.
ದಾಸ ೧೩, ೧೫, ೧೬, ೪೬, ೬೫, ೯೪.
ದ್ವಾದಶಿ ೪೪.
ದ್ವಾಪರ ೪೨.
ದಿನಪಸುತನ ದೂತರು ೧೦೦.
ದಿವಸಕರ ೯.
ದಿವಾಕರ ೧೨೪.
ದೀನನಾಥ ೬೨.
ದೀನವತ್ಸಲ ೧೧೪.
ದೀನವಂದ್ಯ ೪೪.
ದುಗ್ಗಾಣಿ ೫.
ದೇವ ೮೦, ೧೦೬, ೧೦೭, ೧೦೮, ೧೨೬, ೧೩೨.
ದೇವತೆಗಳು ೭೩.
ದೇವೇಂದ್ರ ೬೬.
ದೈತ್ಯ ೩೫.
ದೈವ ೭, ೮೭, ೮೯, ೯೯, ೧೦೨.
ಧ್ರುವ ೧೧.

ನರಕ ೨, ೨೦, ೩೪, ೫೩, ೯೨, ೧೧೬, ೧೨೮.
ನರಕರೌರವ ೨೦.
ನರಹರಿ ೨, ೫, ೧೧.
ನಳ ೭೨.
ನಳಿನನಾಭಿ ೯.
ನಾಕೇಂದ್ರ ೭೧.
ನಾಗಶಯನ ೩.
ನಾಣ್ಯ ೭೪.
ನಾರಗ ೧೨.
ನಾರದ ೭೬.
ನಾರದವಂದ್ಯ ೩.
ನಾರಾಯಣ ೨, ೭, ೩೩, ೪೬, ೬೯.
ನಿಗಮ ೧೩೨.
ನೀಲಮೇಘಶ್ಯಾಮ ೧೦೮.
ಪದುಮಿನೀ ಹೆಣ್ಣು ೧೦೯.
ಪನ್ನಗಶಯನ ೮೯.
ಪರಬ್ರಹ್ಮ ೪೫, ೯೮.
ಪರಮಪದವಿ ೨೦, ೨೩.
ಪರಮಪುರುಷ ೪೭.
ಪರಮಾತ್ಮ ೧೯, ೭೬, ೯೫.
ಪರಮೇಷ್ಟಿಜನಕ ೪೯.
ಪಶ್ಚಿಮರಂಗಧಾಮ ೮೪.
ಪಶುಪತಿ ೭೯.
ಪ್ರಹ್ಲಾದ ೧೧.
ಪಾಂಡವಭೃತ್ಯ ೧೩೨.
ಪುಂಡರೀಕಾಕ್ಷ ೧, ೨೭, ೯೦, ೧೨೭.
ಪುಣ್ಯಕ್ಷೇತ್ರ ೫.
ಪೊಡವಿಪಾಲಕ ೪೩.
ಫಣಿವರದ ೧೬.
ಫುಲ್ಲನಾಭ ೯೩.
ಫುಲ್ಲಾಕ್ಷ ೧೦.
ಬನದಶಂಕರಿ ೧೦೦.
ಬನದಹುಣ್ಣಿವೆ ೧೦೦.
ಬಲಿ ೧೬, ೭೭.
ಬ್ರಹ್ಮ ೧೦, ೬೫.
ಬ್ರಹ್ಮಜ್ಞಾನಿ ೯೨.
ಬಿಸಜಾಕ್ಷ ೮೮.
ಬೇಲೂರು ೭.
ಬೊಮ್ಮ ೩೫.
ಬೊಮ್ಮನಯ್ಯ ೪೩.
ಭವ ೨೬.
ಭವಭಂಜನ ೧೯.
ಭಾಗವತ ೧೨೯.
ಭಾನು ೬೪, ೧೦೫.
ಭಾರತಹುಣ್ಣಿವೆ ೧೦೦.
ಭುಜಗೇಂದ್ರಶಯನ ೧೧೨.
ಭುವನೇಶ ೧೧೯.
ಭೂತೇಶ ೧೨೦.
ಭೋಗಿಶಯನ ೬೪.
ಮಂದರೋದ್ಧರ ೧೨.
ಮಧುಸೂದನ ೨೪.
ಮನು ೩೩, ೩೬.
ಮನುಮಥನಯ್ಯ ೧೪.

ಮಲ್ಲಣ ೯೯.
ಮಹಾಲಯ ೩೧.
ಮಹಾವಿಷ್ಣು ೨೯.
ಮಹಿಷಾಸುರ ೯೯.
ಮಾರ್ತಾಂಡ ೩೪.
ಮಾಧವ ೧೯, ೨೪, ೬೨.
ಮಾಂಧಾತ ೭೨.
ಮಾಯಾವಾದಿಮತ ೧೯.
ಮಾರನಯ್ಯ ೬೯.
ಮಾರಮಣ ೧೩೨.
ಮಾರಿ ೧೨೧, ೧೨೬.
ಮುಕ್ತಿ ೩, ೧೮, ೨೧, ೨೩, ೨೪, ೨೮, ೫೮, ೬೪, ೭೦, ೭೮, ೧೦೨. ೧೧೨, ೧೧೭, ೧೧೯.
ಮೈಲಾರಿ ೯೯.
ಮೋಕ್ಷ ೭೬.
ಮೋದತೀರ್ಥ ೧೯.
ಯಮ ೨೮, ೪೪, ೧೧೮, ೧೨೨.
ಯಮಕುಂಡ ೭೦.
ಯಮದೂತರು ೨೨, ೯೧, ೯೯.
ಯಮಧರ್ಮ ೧೦.
ಯಮನ ಭಟರು ೬, ೪೮.
ಯಮನವರು ೧೭, ೯೭.
ಯಮಪುರ ೬೭, ೬೯.
ರಂಗ ೬, ೪೬, ೮೩, ೯೦.
ರಮ್ಮೆರಮಣ ೩೫.
ರವಿ ೧೨೬.
ರವಿಶಶಿಗ್ರಹಣ ೩೧.
ರಾಮು ೫, ೬೪, ೯೦, ೧೧೭.
ರಾವಣ ೫೫, ೭೩, ೭೯.
ರುಕುಮಿಣಿಯರಸು ೧೦೨.
ರುದ್ರ ೫೧.
ಲಕ್ಷ್ಮೀಪತಿ ೫೨.
ಲೋಕನಾಥ ೯೧.
ವಟಪತ್ರಶಾಯಿ ೧೬.
ವನಜನಾಭ ೯೪.
ವಸುದೇವಸುತ ೪೪.
ವಾನರ ೫೬.
ವಾರಣಾಸಿ ೩.
ವಾರಿಜನಾಭ ೨೩.
ವಾಲಿ ೭೯.
ವಾಸುದೇವ ೬, ೧೩, ೩೭.
ವಿಟ್ಠಲ ೧೩.
ವಿರಿಂಚಿ ೫೧, ೧೨೮.
ವಿಶ್ವಂಭರ ೧೨೮.
ವಿಷ್ಣುದ್ವೇಷಿ ೧೨೩.
ವಿಷ್ಣುವಿನ ದಾಸ ೫೧.
ವೀಸದಕಾಸು ೧೩೦.
ವೇದ ೩೨.
ವೇದಶಾಸ್ತ್ರ ೮, ೨೪, ೪೦.
ವೈಕುಂಠ ೪, ೩೮, ೪೭, ೬೬.
ವೈಷ್ಣವ ೪೫, ೫೧.
ಶರಣರು ೯೨.
ಶಶಿ ೭೯.

ಶಾಸ್ತ್ರ ೪೫, ೫೯, ೬೦, ೧೧೭.
ಶ್ರಾವಣಮಾಸದ ಚವತಿ ೧೦೦.
ಶಿವ ೧೦.
ಶಿವಭಕ್ತ ೧೨೬.
ಶ್ರೀಕಾಂತ ೫೧.
ಶ್ರೀನಾಥ ೧೦೩.
ಶ್ರೀನಿವಾಸ ೪೯, ೧೦೫.
ಶ್ರೀಪತಿ ೯೫.
ಶ್ರೀಲಲನೇಶ ೬೮.
ಶ್ರೀಲೋಲ ೯೫, ೯೮.
ಶ್ರುತಿ ೩೪, ೩೯, ೪೧, ೪೬, ೧೧೭.
ಶೇಷಪತಿ ೯೦.
ಶೇಷಾದ್ರಿ ೧೩೦.
ಷಟ್ಕರ್ಮ ೫೧.
ಸಂಗೀತ ೧೧೨.
ಸತ್ಯಭಾಮೆ ೫೬.
ಸರಸಿಜನಾಭ ೭.
ಸರ್ವೋತ್ತಮ ೧೯.
ಸ್ಮೃತಿ ೪೬.
ಸ್ವರ್ಗ ೩೮, ೪೯.
ಸಾಲೋಕ್ಯ ೪೯.
ಸಿಂಧುಸುತೆ ೬.
ಸಿರಿರಮಣ ೭.
ಸಿರಿವರ ೪೮.
ಸೀತಾರಾಮ ೫, ೧೧೭.
ಸೀತೆ ೫೬.
ಸುರ ೧೨೪.
ಸೂರ್ಯ ೩೪, ೩೫.
ಸೃಷ್ಟಿಗೊಡೆಯ ೧೮.
ಸೃಷ್ಟೀಶ ೧೩೦.
ಹತ್ತವತಾರ ೩೦.
ಹನುಮ ೫೬.
ಹರ ೪೦, ೫೧.
ಹರಿ ೩, ೪, ೫, ೬, ೭, ೮, ೧೦, ೧೨, ೧೩, ೧೪, ೧೮, ೧೯, ೨೦, ೨೧, ೨೫, ೨೬, ೩೦, ೩೧, ೩೬, ೪೦, ೪೨, ೪೪, ೪೬, ೪೭, ೪೮, ೫೦, ೫೧, ೬೨, ೯೧, ೯೬, ೧೦೧, ೧೦೪, ೧೧೮, ೧೨೩, ೧೨೬.
ಹರಿಕಥಾ ೬, ೯, ೧೧, ೨೪, ೫೦.
ಹರಿದಾಸ ೧, ೯, ೪೪, ೫೦, ೬೧, ೮೮, ೯೦.
ಹರಿದಿನ ೨.
ಹರಿನಾಮ ೩, ೭, ೬೭.
ಹರಿಭಕುತಿ ೧೦.
ಹರಿಭಜನೆ ೧೧.
ಹರಿಶ್ಚಂದ್ರ ೭೩.
ಹಂಸ ೧೩೧.
ಹಾಗ ೩೮.

## ವಿದ್ವಾಂಸರ ಸಲಹಾ ಮಂಡಳ

ಶ್ರೀ. ಪಂಡಿತ ಶ್ರೀನಿವಾಸಾಚಾರ್ಯ ಜಾಲಿಹಾಳ
" " ವೆಂಕಣ್ಣಾಚಾರ್ಯ ಮಳಗಿ
" " ಮೂರ್ತ್ಯಾಚಾರ್ಯ ರಾಯಚೂರ
" ವಿದ್ಯಾರತ್ನ ರಾಘವೇಂದ್ರಾಚಾರ್ಯ ಪಂಚಮುಖಿ
" ಪಂಡಿತ ಗುರುರಾಜಾಚಾರ್ಯ ಪಾಂಡುರಂಗಿ
" " ಶ್ರೀ. ಸೇತುರಾಮಾಚಾರ್ಯ ಆದ್ಯ
" " ಕೆ. ಟಿ. ಪಾಂಡುರಂಗಿ, M.A.

## ಉತ್ಸವ ಮಂಡಲದ ಅಧಿಕಾರಿವರ್ಗ

### ಅಧ್ಯಕ್ಷರು

ಶ್ರೀ. ಅನಂತರಾವ ಆಸುಂಡಿ,
ನಿವೃತ್ತ ಜಿಲ್ಹಾ ನ್ಯಾಯಾಧೀಶರು, ವಿಜಾಪೂರ

### ಉಪಾಧ್ಯಕ್ಷರು

ಶ್ರೀ. ಗೋರೆಬಾಳ ಹಣಮಂತರಾಯರು,
ವರದೇಂದ್ರ ಸಾಹಿತ್ಯಮಂಡಲ, ಲಿಂಗಸುಗೂರು
,, ಸುಬೋಧ ರಾಮರಾಯರು,
ಸಂಪಾದಕರು, "ಸುಬೋಧ", ಬೆಂಗಳೂರು
,, ಕೋಲಾರ ರಾಮರಾಯರು, M. A., LL B. ಬಳ್ಳಾರಿ
,, ಬಿ. ಅಶ್ವತ್ಥರಾವ, ಜಿಲ್ಹಾ ನ್ಯಾಯಾಧೀಶರು, ಬಳ್ಳಾರಿ,
,, ಬಿ. ಎ. ದೇಸಾಯಿ, ( ದೇಸಾಯಿ ಕಂಪನಿ ) ಹುಬ್ಬಳ್ಳಿ

### ಕೋಶಾಧ್ಯಕ್ಷರು

ಡಾ. ಶಾಂತರಾವ ಕಮಲಾಪೂರ, M. B.B. S. ಧಾರವಾಡ

### ಕಾರ್ಯಾಧ್ಯಕ್ಷರು

ಶ್ರೀ. ಹ. ರಾ. ಪುರೋಹಿತ, M A. ಹುಬ್ಬಳ್ಳಿ

### ಕಾರ್ಯದರ್ಶಿಗಳು

ಶ್ರೀ. ಬುರ್ಲಿ ಬಿಂದುಮಾಧವ
,, ಕೆ. ಜಿ. ಹಲಸಗಿ, B. A.. B. T.
,, ಹುಚ್ಚರಾವ ಬೆಂಗೇರಿ, M. A., B. T.

PRATIBHA P. DHARWAR

## *About the book....*

The present volume is the V of the series of six volumes and is published under the title of Lokaniti. All the compositions of Shri Purandara Dasa dealing with ethics right from the individual to the universal are published under various sub-heads.

The compositions in the volume unlike others have an universal appeal and application. And great care has been taken to exclude such ones as are obviously not genuine.

R. B. Shri B. Venkateshachar has contributed an introduction in English and editors in Kannada on the principles and practice of ethics applicable in various stages of life of the individual and also to the society.

Usual notes, explanations and references make the book more useful to the readers.